# ಕುದುರೆಮುಖದೆಡೆಗೆ

## ಜಿ.ಟಿ ನಾರಾಯಣ ರಾವ್

## ವಿ–ಪ್ರಕಟಣೆಗೊಂದು ಮುನ್ನುಡಿ




೧೯೬೫ರಲ್ಲಿ ಕಾರ್ಯ ಸಾಧ್ಯವಾದ ಶಿಖರಾರೋಹಣವನ್ನು ೧೯೬೮ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಾಶನ ವಿಭಾಗದ (ಪ್ರಸಾರಾಂಗ ಎಂಬ ಸ್ಪಷ್ಟ ರೂಪ ಬರುವ ಮೊದಲಿನ ಸ್ಥಿತಿ) ಪ್ರಥಮ ಪಠ್ಯೇತರ ಪುಸ್ತಕವಾಗಿ ಪ್ರಕಟಿಸಿತು – ಕುದುರೆಮುಖದೆಡೆಗೆ. ೧೬ + ೧೦೨ + ೧೨ ಛಾಯಾಚಿತ್ರಗಳ ೬ ಹಾಲುಬಿಳುಪಿನ ಪುಟಗಳ ಪುಸ್ತಕದ ಬೆಲೆ ರೂ ಮೂರು. ಮುದ್ರಕರು ಬೃಂದಾವನ ಪ್ರಿಂಟರ್ಸ್, ಬೆಂಗಳೂರು. ಚಿತ್ರಗ್ರಾಹಿಯ ಹೆಸರಿನ ಉಲ್ಲೇಖವಿಲ್ಲ.



ಇದು ಕಾಲಾನುಕ್ರಮದಲ್ಲಿ ಸಣ್ಣಪುಟ್ಟ ಪರಿಷ್ಕರಣೆಗಳೊಡನೆ ಜಿಟಿನಾ ಅವರ ಎನ್ಸಿಸಿ ದಿನಗಳು, ಸವಾಲನ್ನು ಎದುರಿಸುವ ಛಲ ಮತ್ತು ಮುಗಿಯದ ಪಯಣ ಪುಸ್ತಕಗಳ ಭಾಗವಾಗಿಯೂ ಮರುಮುದ್ರಣವನ್ನು ಕಂಡಿದೆ. ಕುದುರೆಮುಖದೆಡೆಗೆ ಪುಸ್ತಕದ ಸ್ವತಂತ್ರ ಅಸ್ತಿತ್ವದ ಐತಿಹಾಸಿಕ ಮಹತ್ತ್ವವನ್ನು ಸಾರುವ ಸಲುವಾಗಿ ಮೂಲ ಪುಸ್ತಕದಲ್ಲಿ ಸಾಂದರ್ಭಿಕವಾಗಿ ಸೇರಿದ ಎಲ್ಲಾ ಮುಮ್ಮಾತುಗಳನ್ನು ಇಲ್ಲಿಯೂ ಸೇರಿಸಿದ್ದೇನೆ. [ಕಿರು ಸೂಚನೆ: ಇಲ್ಲಿನ ಉಲ್ಲೇಖಗಳಲ್ಲಿ 'ಮೈಸೂರು' ರಾಜ್ಯ; 'ಕರ್ನಾಟಕ' ಇನ್ನೂ ಆಗಿರಲಿಲ್ಲ]

**ಜಿ. ಎನ್ ಅಶೋಕವರ್ಧನ**










**ಅತ್ರಿ ವಿ – ಪುಸ್ತಕಗಳು**

ಅಭಯಾದ್ರಿ, ಪಿಂಟೋರವರ ಓಣಿ, ಕರಂಗಲ್ಪಾಡಿ, ಮಂಗಳೂರು ೫೭೫೦೦೩ ದೂರವಾಣಿ. ೦೮೨೪–೨೪೯೨೩೯೭
ಮಿಂಚಂಚೆ: athreebook@gmail.com | ಜಾಲತಾಣ: www.athreebook.com

# ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದ ಡಾ। ವಿನಾಯಕ ಕೃಷ್ಣ ಗೋಕಾಕ್ ಅವರ ೨೨-೪-೧೯೬೮ರ ಮುನ್ನುಡಿ




ಬೆಂಗಳೂರು ವಿಶ್ವವಿದ್ಯಾಲಯದ ಎನ್ಸಿಸಿಯ ನೇತೃತ್ವದಲ್ಲಿ ಪರ್ವತಾರೋಹಿಗಳ ತಂಡವೊಂದು ಕುದುರೆಮುಖದೆಡೆಗೇರಿ ಅದನ್ನು ಪರೀಕ್ಷಿಸಿ ಬಂತು. ಮೇಜರ್ ಎಂ. ಆರ್. ನಾರಾಯಣ ಸಿಂಗ್, ಆಫೀಸರ್ ಕಮಾಂಡಿಂಗ್ ಅವರ ಹಿರಿತನದಲ್ಲಿ ಈ ತಂಡ ರಚನೆಯಾಯಿತು. ಮೇಜರ್ ಜಿ. ಟಿ. ನಾರಾಯಣ ರಾವ್ ಹಾಗು ಇನ್ನುಳಿದ ಕೆಲವು ಪ್ರಾಧ್ಯಾಪಕರು ಅದಕ್ಕೆ ಸ್ಫೂರ್ತಿದಾಯಕರಾದರು. ಸುಮಾರು ೩೬ ಕೆಡೆಟ್ ವಿದ್ಯಾರ್ಥಿಗಳು ಈ ಆರೋಹಣದಲ್ಲಿ ಭಾಗವಹಿಸಿದರು. ವಿಶ್ವವಿದ್ಯಾಲಯ ಇದಕ್ಕಾಗಿ ಬಂದ ವೆಚ್ಚವನ್ನೆಲ್ಲಾ ನೋಡಿಕೊಂಡಿತು. ಈ ಸಾಹಸದ ಕಥನ ಮೇಜರ್ ಜಿ. ಟಿ. ನಾರಾಯಣ ರಾವ್ ಅವರು ಬರೆದ ಈ ಉತ್ತಮ ವರ್ಣನೆಯಲ್ಲಿದೆ.

ಇಂತಹ ಒಂದು ಸಾಮೂಹಿಕ ಸಾಹಸವನ್ನು ಕೊನೆಗಾಣಿಸಲು ಸಹಕಾರವು ಅವಶ್ಯ. ಅಧಿಕಾರಿಗಳೂ ಪ್ರಾಧ್ಯಾಪಕರೂ ಹಾಗು ವಿದ್ಯಾರ್ಥಿಗಳೆಲ್ಲ ಕೂಡಿ ಇಂತಹ ಸಾಮೂಹಿಕ ಪ್ರಯೋಗಕ್ಕೆ ಸಿದ್ಧವಾಗದಿದ್ದರೆ ಅದು ಸಾಧ್ಯವೇ ಇಲ್ಲ. ವಿದ್ಯಾರ್ಥಿಗಳಲ್ಲಿಯ ಉತ್ಸಾಹಕ್ಕೆ ಪ್ರಾಧ್ಯಾಪಕರ ಮಾರ್ಗದರ್ಶನ ಬೇಕಾಗುತ್ತದೆ. ಪರಸ್ಪರ ಸೌಹಾರ್ದ ಅತ್ಯಾವಶ್ಯಕವಾಗುತ್ತದೆ. ಇಂತಹ ಪ್ರೇರಣೆಗಳ ಮಧುರ ಸಮ್ಮಿಲನವಾಯಿತೆಂದೇ ತಂಡದ ಈ ಸಾಹಸ ಯಶಸ್ವಿಯಾಯಿತು. ಈ ತಂಡದವರಲ್ಲಿ ಎದೆಗಾರಿಕೆ ಇತ್ತು. ಬಂದ ಕಷ್ಟಗಳನ್ನು ವಿನೋದದಲ್ಲಿ ತೇಲಿಸಿಕೊಂಡು ಹೋಗುವ ಚಾತುರ್ಯವಿತ್ತು. ಮೇಲಾಗಿ ಸರ್ವಶ್ರೀ ಜಿ. ಟಿ. ನಾರಾಯಣರಾವ್, ನಿಸಾರ್ ಅಹಮದ್, ಕೆ.ಎನ್. ಶಿವಪ್ಪ ಮೊದಲಾದ ಸಾಹಿತಿಗಳ ಸನ್ನಿಧಿ ಈ ಸ್ಫೂರ್ತಿಗೆ ಚೈತನ್ಯದಾಯಕವಾಯಿತು. ಸಾಹಸವು ಯಶಸ್ವಿಯಾಗಿದ್ದರೂ ಸಾಹಿತ್ಯದಲ್ಲಿ ಅದಕ್ಕೆ ಸ್ಥಾನ ದೊರೆಯದೆ ಹೋಗಬಹುದಿತ್ತು. ಆದರೆ ಶ್ರೀಮಾನ್ ಜಿ.ಟಿ. ನಾರಾಯಣರಾವ್ ಅವರು ಈ ಸಾಹಸವು ಸಾಹಿತ್ಯದಲ್ಲಿ ಸುಂದರವಾಗಿ ಒಡಮೂಡುವಂತಹ ಒಂದು ಉತ್ತಮ ಆರೋಹಣ ವರ್ಣನೆಯನ್ನು ಕನ್ನಡಕ್ಕೆ ಸಲ್ಲಿಸಿದ್ದಾರೆ. ಇಂಥದೊಂದು ವರ್ಣನಾಪರ ಕೃತಿಯೊಂದನ್ನು ವಿಶ್ವವಿದ್ಯಾಲಯವು ಬೆಳಕಿಗೆ ತರಬಹುದೆಂದು ನಾನು ಹೇಳಿದಾಗ ಇಷ್ಟೊಂದು ಉತ್ತಮ ಕೃತಿ ಹೊರಗೆ ಬರಬಹುದೆಂದು ನಾನೆಣಿಸಿರಲಿಲ್ಲ. ಇಂತಹ ಕೃತಿಯೊಂದನ್ನು ರಚಿಸಿದ ಶ್ರೀಮಾನ್ ಜಿ. ಟಿ. ನಾರಾಯಣರಾವ್ ಅವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಸಾಹಸಗಳೆಲ್ಲ ದಂತ ಕಥೆಯಾಗಿ ನಮ್ಮ ನಾಡು ಗಾಢವಾಗಿ ನಿದ್ರಿಸುತ್ತಿರುವ ಕಾಲವೊಂದಿತ್ತು. ಆದರೆ ದೇಶ ಈಗ ಎಚ್ಚತ್ತಿದೆ. ಅಂತೆಯೇ ಸಾಹಸಗಳ ಕಥೆ ಮತ್ತೆ ಪ್ರಾರಂಭವಾಗಿದೆ. ಸಾಹಸವು ವಾಸ್ತವಿಕ ಜೀವನದ ಭಾಗವಾದಾಗ ಜನವೆಲ್ಲಾ ಪ್ರಗತಿಪರವಾಗಿ ಸಮಾಜದಲ್ಲಿ ಸಮೃದ್ಧಿ ಬರಬಲ್ಲದು. ಇಂತಹ ಒಂದು ಘಟನೆಯನ್ನು ಸವಿವರವಾಗಿ ನಾವಿಲ್ಲಿ ಸವಿಯಬಲ್ಲೆವು.

ಇಂತಹ ಅನೇಕ ಕೃತಿಗಳು ನಾಡಿನ ಜೀವನದಲ್ಲು ಹಾಗು ಸಾಹಿತ್ಯದಲ್ಲಿ ಹುಟ್ಟಿ ಬರಲೆಂದು ನಾನು ಹಾರೈಸುತ್ತೇನೆ.

# ಬೆಂವಿವಿಯ ಪ್ರಕಾಶನ ವಿಭಾಗದ ಪ್ರಧಾನ ಸಂಪಾದಕ
# ಡಾ। ರಂ. ಶ್ರೀ. ಮುಗಳಿಯವರ ೨೮–೪–೧೯೬೮ರ ನಾಲ್ಕು ಮಾತು

ಬೆಂಗಳೂರು ವಿಶ್ವವಿದ್ಯಾಲಯದ ಪುಸ್ತಕ ಪ್ರಕಾಶನ ವಿಭಾಗದ ಮೊದಲನೆಯ ಕಿರುಹೊತ್ತಗೆಯಾಗಿ 'ಕುದುರೆಮುಖದೆಡೆಗೆ' ಈ ಪುಸ್ತಕವು ಬೆಳಕಿಗೆ ಬರುತ್ತಲಿದೆ, ಮುಂದೆ ಬರಲಿರುವ ಸಾವಿರಾರು ಕಿರಣಗಳಿಗೆ ಅರುಣೋದಯವಾಗಿ ಬರುತ್ತಲಿದೆ. ಈ ಪ್ರಕಾಶನ ವಿಭಾಗದಲ್ಲಿ ಪಠ್ಯ ಮತ್ತು ಪಠ್ಯೇತರ ಎಂದು ಎರಡು ಬಗೆಯ ಪುಸ್ತಕಗಳನ್ನು ಪ್ರಕಟಿಸುವ ಉದ್ದೇಶವನ್ನು ಇಟ್ಟುಕೊಂಡಿದೆ. ಪಠ್ಯ ಪುಸ್ತಕಗಳಲ್ಲಿ ಮೊದಲನೆಯದಾಗಿ ಪಿ.ಯು.ಸಿ ವರ್ಗಕ್ಕಾಗಿ ಗಣಿತಶಾಸ್ತ್ರದ ಪುಸ್ತಕವು ಪ್ರಥಮ ಸಂಪುಟದಲ್ಲಿ ಈಗಾಗಲೇ ಪ್ರಕಟವಾಗಿದೆ. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಅದೇ ವಿಷಯವು ಇದಿರಿದಿರಾಗಿ ಜೊತೆಪುಟಗಳಲ್ಲಿ ಅಚ್ಚಾಗಿರುವುದು ಈ ಪುಸ್ತಕದ ವೈಶಿಷ್ಟ್ಯವಾಗಿದೆ. ಬಹುಶಃ ನಮ್ಮ ದೇಶದಲ್ಲಿ ಪಠ್ಯಪುಸ್ತಕ ಪ್ರಪಂಚದಲ್ಲಿ ಇದೇ ಮೊದಲನೆಯ ಸಾಹಸವೆಂದು ಹೆಮ್ಮೆಯಿಂದ ಹೇಳಬಹುದು. ಇದರಂತೆಯೇ ಪಠ್ಯೇತರ ಪುಸ್ತಕಗಳಲ್ಲಿ ಮೊದಲನೆಯದಾಗಿ ಪ್ರಕಟಗೊಳ್ಳುತ್ತಿರುವ 'ಕುದುರೆಮುಖದೆಡೆಗೆ' ಇದು ಕೂಡ ಹೊಸ ಸಾಹಸವಾಗಿದೆ. ಪರ್ವತಾರೋಹಣವನ್ನು ಒಂದು ರಸಚಿತ್ರವಾಗಿ ವರ್ಣಿಸಿರುವ ಕೃತಿಗಳು ಕನ್ನಡದಲ್ಲಿ ಇರಲೇ ಇಲ್ಲ. ಪರ್ವತಾರೋಹಣವೆಂಬ ಸಾಹಸವೇ ಕನ್ನಡಿಗರಿಗೆ ಹೊಸದು. ಅಂಥ ಸಾಹಸವನ್ನು ಬೆಂಗಳೂರು ವಿಶ್ವವಿದ್ಯಾಲಯದ ಕೆಲವು ಸಾಹಸರಸಿಕರಾದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಎನ್ನಿಸಿ ಅಧಿಕಾರಿಗಳ ಸಹಕಾರದಿಂದ ಕೈಕೊಂಡು ಕರ್ನಾಟಕದಲ್ಲಿಯ ಒಂದು ಗಿರಿಶಿಖರವನ್ನು ಏರಿ ಹೊಸ ವಿಕ್ರಮವನ್ನು ಸ್ಥಾಪಿಸಿದರು. ಅದರ ರಸವತ್ತಾದ ವರ್ಣನೆಯನ್ನು ಶ್ರೀ ಜಿ.ಟಿ. ನಾರಾಯಣರಾಯರು ಈ ಪುಸ್ತಕದಲ್ಲಿ ಮಾಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಹೊಸ ಒಂದು ಕಾಣಿಕೆಯನ್ನು ಸಲ್ಲಿಸಿದ್ದಾರೆ.

'ಕುದುರೆಮುಖದೆಡೆಗೆ' ಈ ಪುಸ್ತಕ ರಚನೆಗೆ ಪ್ರೇರಣೆಯನ್ನೂ ಪ್ರೋತ್ಸಾಹವನ್ನೂ ಕೊಟ್ಟು ಇದಕ್ಕೆ ಮುನ್ನುಡಿಯನ್ನೂ ಬರೆದುಕೊಟ್ಟ ವಿಶ್ವವಿದ್ಯಾಲಯದ ಮಾನ್ಯ ಉಪಕುಲಪತಿಗಳಾದ ಡಾ. ವಿ.ಕೃ. ಗೋಕಾಕ ಅವರಿಗೆ ಪ್ರಕಾಶನ ವಿಭಾಗದ ಪರವಾಗಿ ನಾನು ಹಾರ್ದಿಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ವಿಶ್ವವಿದ್ಯಾಲಯದ ರಿಜಿಸ್ಟ್ರಾರರಾದ ಶ್ರೀ ಮಲ್ಲಿಕಾರ್ಜುನಪ್ಪನವರು ಇದರ ಪ್ರಕಟಣೆಗಾಗಿ ನೀಡಿರುವ ಸರ್ವವಿಧ ಸಹಾಯ ಮತ್ತು ಪ್ರೋತ್ಸಾಹಕ್ಕಾಗಿ ಅವರಿಗೂ ನಮ್ಮ ಕೃತಜ್ಞತೆ ಸಲ್ಲುತ್ತದೆ.

# ಲೇಖಕ ಜಿ.ಟಿ. ನಾರಾಯಣ ರಾವ್ ೫-೫-೧೯೬೮ರ ಅರಿಕೆ



ಕಾರ್ಯ ಯಾವುದೇ ಇರಲಿ, ಅದನ್ನು ಮಾಡುತ್ತಿರುವಾಗ ನಾವೇ ಅದರ ಸೂತ್ರಧಾರರು, ನಾವಿಲ್ಲದೇ ಅದು ಇಲ್ಲ ಎಂದು ಮುಂತಾದ ಭಾವನೆ ಬರುವುದುಂಟು. ಹಿರಿಯರು ವಾತ್ಸಲ್ಯದಿಂದ, ಔದಾರ್ಯದಿಂದ ನಾಲ್ಕು ಒಳ್ಳೆಯ ನುಡಿ ಆಡಿದಾಗ ಈ ಭಾವನೆಗೆ ಪ್ರತ್ಯಕ್ಷರೂಪ ಬರುವುದೂ ಉಂಟು.

ಆದರೆ ನಡೆದು ಹೋದ ಕಾರ್ಯದಿಂದ ದೂರವಾಗಿ ನಿಂತು, ನಿರ್ಲಿಪ್ತವಾಗಿ ಹಿಂತಿರುಗಿ ನೋಡಿದರೆ 'ಜೀವವಿಂತಜ್ಞಾತ ಸೂತ್ರದಾಟದ ಬೊಂಬೆ, ಭಾವಿಸಾ ಸೂತ್ರಗಳ' ಎಂಬ ಮಾತಿನ ಅರ್ಥ ಚೆನ್ನಾಗಿ ತಿಳಿಯುವುದು, ಪೀಠಿಕೆಯ ಮಾತು "...ಆದ್ದರಿಂದ ೧೨ನೇ ಮೈಸೂರು ನೆಗೆಯಿತು" ಇದನ್ನೇ ಪುಷ್ಟೀಕರಿಸುತ್ತದೆ.

ವಿಶ್ವವಿದ್ಯಾಲಯದ, ಕಾಲೇಜಿನ, ಎನ್ಸಿಸಿಯ ಮೂಲ ಚೈತನ್ಯ ಘಟಕಗಳು ವಿದ್ಯಾರ್ಥಿಗಳು. ಒಂದು ಅನುಕೂಲ ಸಂದರ್ಭದಲ್ಲಿ ಈ ಚೈತನ್ಯ ಘಟಕಗಳ ಮೊತ್ತ ಪರ್ವತಾರೋಹಣ ಸಾಹಸಕಾರ್ಯ ನಡೆಸಲು ಪ್ರೇರಕ ವಿದ್ಯುಚ್ಚೈತನ್ಯವಾಯಿತು. ಅದರ ಪ್ರಭಾವಕ್ಕೆ ಒಳಗಾದ ಹಲವರು ಅಯಸ್ಕಾಂತಗಳಾದೆವು.

ಈ ಕೆಲಸ – ನಿಜ ಕುದುರೆಮುಖ ಹತ್ತುವುದಿರಲಿ: ಕಾಗದ, ಲೆಕ್ಕಣಿಕೆಗಳಲ್ಲಿ ಅದನ್ನು ಬಣ್ಣಿಸುವುದಿರಲಿ – ನನಗೆ ತುಂಬ ಸಂತೋಷ ನೀಡಿದೆ. ಇದನ್ನು ಒದಗಿಸಿದಂತಹ ಹಿರಿಯರೆಲ್ಲರಿಗೂ ಕೃತಜ್ಞತೆಯ ವಂದನೆಗಳನ್ನು ಅರ್ಪಿಸುತ್ತೇನೆ. ಕಿರಿಯ ಸೋದರರಿಗೆ ಧನ್ಯವಾದಗಳನ್ನು ನೀಡುತ್ತೇನೆ.

# ಎನ್ಸಿಸಿಯ ರಾಜ್ಯ ವರಿಷ್ಠ ಏರ್ ಕಮ್ಮೊಡೋರ್ ಎಸ್.ಕೆ. ಭಕ್ಷಿಯವರ ೧೭–೪–೧೯೬೮ರ

# APPRECIATION



It is a commendable effort of Major G.T Narayana Rao to have presented a very graphic and absorbing account of the successful expedition of his team of young mountaineers to Kuduremukh. Major G.T. Narayana Rao, himself a lover of adventure, helped and guided his team at every stage and a large measure of credit for the success of the expedition goes to him.

It was the Bangalore University which sponsored and financed this mountaineering effort of their students. Sri T.R. Jayaraman, the then Vice-Chancellor and the Education Secretary of the Government of Mysore and Dr. V.K. Gokak, the present Vice-Chancellor readily appreciated the value of such outdoor life and adventure in the fulfillment of the aims of university education and encouraged the expedition.

The National Cadet Corps was also proud to associate itself with the expedition and Major M. R. Narayan Singh and his staff guided and assisted the expedition in every possible way. Some of the students, who, as cadets of NCC, had undergone Mountaineering courses at the Mountaineering Institutes at Manali and Darjeeling became instructors to their enthusiastic team-mates and it is gratifying that the fascinating sport of mountaineering is attracting a large number of our students.

I congratulate Major G. T. Narayana Rao on his fine effort.

# ಸಾಹಸಯಾತ್ರೆಯಲ್ಲಿ ಪ್ರಾಧ್ಯಾಪಕ–ಅಧಿಕಾರಿಯಾಗಿ ಭಾಗಿಯಾದ ಕೆಂಡಗಣ್ಣ ಸ್ವಾಮಿಯವರು ಕಂಡ ಕುದುರೆಮುಖ

ನಿನ್ನೋಡ್ದಾಗೆಲ್ಲಾ – ಶಾಂತು!
ಕುದ್ರೇ ಮುಖದ್ದೇ ಭ್ರಾಂತು

ಕುದ್ರೇ ಮುಖ ಹತ್ನೋಡಿದ್ರೆ ನೆಲ,
ಮೈಕೈಗೆಲ್ಲ ಬರ್ತದೇಂದ್ರೆ – ಬಲ!
ಹತ್ತೋಗಂಟಾ ಉಡುಗ್‌ಹೋಗ್ತೈತೇ ಸಕ್ತಿ
ಹತ್ತಿದ್ಮೇಲೇ ಹುಟ್ಕೋತ್ತೈತೇ ಬಕ್ತಿ!

ನೀ ಮಾಡ್ತೀಯಲ್ಲಾ – 'ಬ್ಯಾಲೆ'
ಅದೇ ತರಾ ಪ್ರಕೃತಮ್ಮನ್ ಲೀಲೆ!

ಹಸಿರ್ ಸೀರೆ ಉಟ್ಕೊಂಡವ್ಳೆ
ಕಾಲಿಗ್ಗೆಜ್ಜೆ ಕಟ್ಕೊಂಡವ್ಳೆ
ಹಾಡ್ತಾ ನಗ್ತಾ ಕುಣಿತಾ ಅವ್ಳೆ
ಸಾವಿರ್ ವರ್ಸ್ದಾ ಸುಂದ್ರೀ – ಇವ್ಳೆ!

ನೋಡೇ ಶಾಂತು – ನೋಡು
ಆಗ್ಯೆತೇನು ಅವಳ್ಗೆ – ಬೋಡು?

# ೧೨ನೇ ಮೈಸೂರು ಬೆಟಾಲಿಯನ್ ಎನ್ಸಿಸಿಯ ವರಿಷ್ಠಾಧಿಕಾರಿ ಮೇಜರ್ ಎಂ. ಆರ್. ನಾರಾಯಣ್ ಸಿಂಗ್ ಅವರ ೧೫-೪-೧೯೭೪ರ ಪೀಠಿಕೆ



ಬೆಂಗಳೂರು ವಿಶ್ವವಿದ್ಯಾಲಯ ಮಾರ್ಗದರ್ಶನ ಮಾಡಿದೆ. "ಏನು ಯೋಜನೆಯಿದೆ? ಹಣದ ವಿಚಾರ ಚಿಂತೆ ಮಾಡಬೇಡಿ!" ಈ ಉತ್ತೇಜಕ ಆಶ್ವಾಸನೆ ನೀಡಿದವರು ಮೊದಲಿನ ಉಪಕುಲಪತಿ ಶ್ರೀ ಟಿ. ಆರ್. ಜಯರಾಮನ್ ಅವರು "ನಿಮ್ಮ ಸಕಲ ಚಟುವಟಿಕೆಗಳಿಗೂ ವಿಶ್ವವಿದ್ಯಾಲಯದ ವಿಶ್ವಾಸಪೂರ್ವಕ ಸ್ವಾಗತ, ಬೆಂಬಲ ಇದೆ" ಪದ್ಮಶ್ರೀ ಡಾ। ವಿ. ಕೆ. ಗೋಕಾಕರವರ ಪ್ರೋತ್ಸಾಹದ ನುಡಿ.

"ನಮ್ಮ ವಿದ್ಯಾರ್ಥಿಗಳು ಸರ್ವಾಂಗಸುಂದರವಾಗಿ ಅಭಿವೃದ್ಧಿ ಹೊಂದಬೇಕು. ಎನ್ಸಿಸಿಗೆ ನನ್ನ ವಿಶೇಷ ಗಮನವಿದೆ" ಪ್ರಿನ್ಸಿಪಾಲ್ ಪ್ರೊ. ಆರ್. ಆರ್. ಉಮರ್ಜಿಯವರ ನಿರಂತರ ಚೈತನ್ಯದ ಆಶಯ.

ಕುದುರೆಮುಖ ಕರೆಯಿತು, ವಿದ್ಯಾರ್ಥಿಗಳು ಕಿವಿ ನಿಮಿರಿಸಿದರು. ವಿಶ್ವವಿದ್ಯಾಲಯ ಧನಸಹಾಯ ಮಾಡಿತು. ಕಾಲೇಜು ಬೆಂಬಲ ನೀಡಿತು. ಆದ್ದರಿಂದ ೧೨ನೇ ಮೈಸೂರು ನೆಗೆಯಿತು!

ಹುಡುಗರ ಸಾಹಸವನ್ನು ವಿವರವಾಗಿ ಬರೆದಿರುವ ಈ ಪುಸ್ತಕಕ್ಕೆ ಪೀಠಿಕೆ ಬರೆಯಲು, 'ಕುದುರೆಮುಖ ಸಾಹಸ'ದ ನಾಯಕನಾಗಿದ್ದ ನನಗೆ ತುಂಬ ಸಂತೋಷ ಮತ್ತು ಅಭಿಮಾನ. ಇದರ ಬರವಣಿಗೆಯನ್ನು ಪ್ರಚೋದಿಸಿ, ತಮ್ಮ ಪ್ರಥಮ ಗ್ರಂಥವನ್ನಾಗಿ ಪ್ರಕಾಶನಗೊಳಿಸಿರುವ ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳ ಮತ್ತು ಇತರ ಅಧಿಕಾರಿಗಳ ಔದಾರ್ಯವನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ವಿದ್ಯಾರ್ಥಿಗಳ ಸಾಹಸ ಕ್ರೀಡೆಗೆ ಒಂದು ಉತ್ತಮ ಮತ್ತು ಶಾಶ್ವತ ರೂಪವನ್ನು ಇಲ್ಲಿ ಕೊಡಲಾಗಿದೆ.

ಪರ್ವತಾರೋಹಣ ಸಾಹಸದ ಹಿನ್ನೆಲೆಯನ್ನು ಈ ಸಂದರ್ಭದಲ್ಲು ಸ್ಥೂಲವಾಗಿ ನಿರೂಪಿಸಬಹುದು. ಕೆಲವು ವರ್ಷಗಳ ಹಿಂದಿನ ಮಾತು. ಪ್ರಥಮ ಭಾರತೀಯ ಮತ್ತು ಪ್ರಪಂಚದ ಹಿಮಾಲಯವೀರ ತೇನ್‌ಸಿಂಗ್ ನಾರ್ಕೆಯವರು ಮುಂದಿಟ್ಟ ದಿಟ್ಟ ಹೆಜ್ಜೆಗಳಲ್ಲಿ ಇತರ ತರುಣರು ಮುನ್ನಡೆಯಲು ಉದ್ಯುಕ್ತರಾದರು. ಆ ಸಮಯದಲ್ಲಿ ಎನ್ಸಿಸಿ ಸಂಸ್ಥೆಯ ಮೂಲ ಕ್ಯಾಡೆಟ್ಟುಗಳನ್ನು ಹಿಮಾಲಯದ ಮನಾಲಿ, ಡಾರ್ಜಿಲಿಂಗ್ ಮುಂತಾದ ಪ್ರದೇಶಗಳಿಗೂ ದೇಶದ ಇತರ ಭಾಗಗಳಲ್ಲಿರುವ ಪರ್ವತಗಳಿಗೂ ಆರೋಹಣ ಸಾಹಸ ಪ್ರದರ್ಶನಕ್ಕಾಗಿ ಕಳಿಸಲಾಯಿತು. ಈ ಆಹ್ವಾನಕ್ಕೆ (ಖರ್ಚು ಸರಕಾರದ್ದಾದರೂ) ಪ್ರಾರಂಭದಲ್ಲಿ ದೊರೆತ ಮನ್ನಣೆ ಅತ್ಯಲ್ಪ. ಅಲ್ಲಿ ಇಲ್ಲಿ ಏನಾದರೂ ಒಬ್ಬ ಕ್ಯಾಡೆಟ್ ಮುಂದೆ ಬಂದರೆ ಅವನ ಹಿರಿಯರು ಅವನು ಹೋಗದಂತೆ ಅಡ್ಡಿ ಮಾಡುತ್ತಿದ್ದರು.

೧೯೭೩ರಲ್ಲಿ ಚಿಂತಾಮಣಿಯ ಪಾಲಿಟೆಕ್ನಿಕ್‌ನ ಒಬ್ಬ ಎನ್ಸಿಸಿ ಆಫೀಸರರೂ ಬೆಂಗಳೂರಿನ ವಿಜಯಾ ಕಾಲೇಜಿನ ಒಬ್ಬ ಕ್ಯಾಡೆಟ್ಟೂ ಹಿಮಾಲಯ ಪರ್ವತಾರೋಹಣ ಸಂಸ್ಥೆಯ ಮೂಲ ಶಿಬಿರಕ್ಕೆ ಹೋಗಿ ಬಂದರು. ಅವರ ಬೆನ್ನ ಹಿಂದೆ ಬೆಂಗಳೂರಿನ ಸರಕಾರೀ ಕಾಲೇಜಿನ ಒಬ್ಬ ವಿದ್ಯಾರ್ಥಿಯೂ ಹೋಗಿ ಬಂದನು. ಈ ಮೂವರು ಮಾರ್ಗದರ್ಶಿಗಳು ಹಿಮಾಲಯದ ಸಂದೇಶವನ್ನೂ ಆಹ್ವಾನವನ್ನೂ ನಮ್ಮ ನಾಡಿಗೆ ತಂದರು. ಅವರ ಅದ್ಭುತ ಅನುಭವಗಳನ್ನು ಕೇಳಿದ ವಿದ್ಯಾರ್ಥಿಗಳು ಮೈಮರೆತರು. ಹಿಮಾಲಯದ ಆಸೆ ಹುಡುಗರಲ್ಲಿ ಸಾಂಕ್ರಾಮಿಕವಾಯಿತು. ಇಂದಿನವರೆಗೆ ನಮ್ಮ ಬೆಟಾಲಿಯನ್ನಿನಿಂದ (ಅಂದರೆ ಬೆಂಗಳೂರಿನ ಸರಕಾರೀ ಕಾಲೇಜಿನಿಂದ) ಒಂದು ನೂರಕ್ಕೂ ಮಿಕ್ಕಿ ಕ್ಯಾಡೆಟ್‌ಗಳು ಮೂಲ ಶಿಬಿರಗಳಿಗೆ ಹೋಗಿ ಯಶಸ್ಸುಗಳಿಸಿ ಮರಳಿದ್ದಾರೆ.

ಕುದುರೆಮುಖ ಸಾಹಸ ಇಂತಹ ವಿದ್ಯಾರ್ಥಿಗಳ ಪ್ರಚೋದನೆಯಿಂದ ರೂಪುಗೊಂಡಿತು. ಇದರ ನಾಯಕತ್ವ ವಹಿಸಲು ನಾನು ಮೊದಲು ಅರೆಮನಸ್ಕನಾಗಿದ್ದೆ. ಆಕಸ್ಮಿಕವಾಗಿ ಉಂಟಾಗಬಹುದಾದ ಅನಾಹುತದ ಪರಿಣಾಮವನ್ನು ಕುರಿತಾಗಿ ನನ್ನ ಮಿತ್ರರನೇಕರು ನನಗೆ ಎಚ್ಚರಿಕೆ ನೀಡಿದರು. ಮೈಸೂರು ರಾಜ್ಯದಲ್ಲಿ ಎನ್ಸಿಸಿ ಮುಖ್ಯಾಧಿಕಾರಿಗಳಾಗಿರುವ ಏರ್ ಕಮ್ಮೊಡೋರ್ ಎಸ್. ಕೆ. ಭಕ್ಷಿಯವರು ಕುದುರೆಮುಖ ಸಾಹಸದ ಯೋಜನೆಯನ್ನು ಉತ್ಸಾಹದಿಂದ ಸ್ವಾಗತಿಸಿದರು; ಮತ್ತು ಅದಕ್ಕೆ ಬೇಕಾದ ವಿಶಿಷ್ಟ ಆಡಳಿತ, ಶಿಕ್ಷಣ, ಪ್ರಯಾಣ ಮುಂತಾದ

ಸೌಕರ್ಯಗಳನ್ನು ಒದಗಿಸಿ ಕೊಟ್ಟರು. ಆದರೆ ಒಂದು ವಿಚಾರವನ್ನು ಸ್ಪಷ್ಟವಾಗಿ ನನಗೆ ಮಂದಟ್ಟು ಮಾಡಿದರು. "ನಾರಾಯಣ್! ಇದರಲ್ಲಿ ಒಂದು ಪುಟ್ಟ ಗಾಯವನ್ನೂ ನಾನು ಸಹಿಸಲಾರೆ" – ಅಂದರೆ ಕ್ಯಾಡೆಟ್‌ಗಳನ್ನು ಕರೆದುಕೊಂಡು ಹೋಗುವ ನನ್ನ ಹೊಣೆಗಾರಿಕೆಯ ಗುರುತ್ವವನ್ನು ಅವರು ಸೂಚಿಸಿದ್ದರು.

ವಾಸ್ತವಿಕವಾಗಿ ನನ್ನ ಅನುಯಾಯಿ ಮೇಜರ್ ಜಿ. ಟಿ. ನಾರಾಯಣರಾಯರು ಈ ಸಾಹಸ ಕಾರ್ಯದ ಏಕೈಕ ಶಿಲ್ಪಿ. ನಾಯಕನಾದ ನಾನು ಅದರ ವಿಶಿಷ್ಟ ಭಾರವನ್ನೂ ಹೊರಬೇಕಾಗಿತ್ತು. ಆದರೆ ಅದೇ ಸಮಯದಲ್ಲಿ ನಾನು ಕೆಲವು ವೈಯಕ್ತಿಕ ದುರಂತಗಳನ್ನು ಎದುರಿಸಬೇಕಾಯಿತು. ಈ ಆಘಾತ ಪರಂಪರೆಯಿಂದ ಜರ್ಝರಿತವಾದ ನನ್ನ ಮನಸ್ಸು ನಾಯಕತ್ವದ ಗುರುತರ ಜವಾಬ್ದಾರಿಯನ್ನು ಹೊರಲು ಸಿದ್ಧವಾಗಿರಲಿಲ್ಲ. ದುಃಖ ನಿರಾಶೆಗಳು ನನ್ನನ್ನು ಕವಿದಿದ್ದಾಗ ಜೀಟಿಯವರ ನಿರಂತರ ಸಿದ್ಧತೆ ಮತ್ತು ಆಶಾದಾಯಕ ಮಾತುಗಳಿಂದ ಪ್ರೇರಣೆಗೊಂಡ ನಾನು ನಾಯಕತ್ವವನ್ನು ವಹಿಸಿಕೊಂಡೆ. ಆದರೆ ಜೀಟಿಯವರೇ ಕುದುರೆಮುಖ ಸಾಹಸದ ವಿವರಗಳನ್ನು ಕೂಲಂಕಶವಾಗಿ ಯೋಜಿಸಿದರು; ಮತ್ತು ಅವುಗಳನ್ನು ದಕ್ಷವಾಗಿ ಕಾರ್ಯರೂಪಕ್ಕೆ ಇಳಿಸಿದರು. ಅವರ ಸಮಯಸ್ಫೂರ್ತಿ, ಅಪಾರ ಚೈತನ್ಯ ಮತ್ತು ಕೆಲಸ ಯಾವುದೇ ಇರಲಿ, ಎಷ್ಟು ಕಠಿಣದ್ದೇ ಇರಲಿ ಅದನ್ನು ನಿರ್ವಹಿಸುವ ಛಲ ಮತ್ತು ಶ್ರದ್ಧೆ ಇವುಗಳನ್ನು ನಾನು ಬಹಳವಾಗಿ ಮೆಚ್ಚುತ್ತೇನೆ. ಅವರೊಡನೆ ನೆರಳಾಗಿ ದುಡಿದು 'ಕುದುರೆಮುಖ ದಿವಸ'ಗಳನ್ನು ಸಂತೋಷದಾಯಕವಾಗಿ ಮಾಡಿದ ನಮ್ಮ ಬೆಟಾಲಿಯನ್ನಿನ ಎನ್ಸಿಸಿ ಆಫೀಸರುಗಳಾದ ಲೆಫ್ಟಿನೆಂಟುಗಳು ಕೆ.ಎಸ್ ನಿಸಾರ್ ಅಹಮದ್, ಕೆ.ಎನ್ ಶಿವಪ್ಪ ಮತ್ತು ಎಸ್ ಕೆಂಡಗಣ್ಣ ಸ್ವಾಮಿ ಇವರ ಸೇವೆಯನ್ನು ನಾನು ಸ್ಮರಿಸುತ್ತೇನೆ. ವಿದ್ಯಾರ್ಥಿ ಶಿಕ್ಷಕರಾಗಿದ್ದ ಎ. ಲಕ್ಷ್ಮೀನಾರಾಯಣ, ವಿ.ಜೆ. ಪಿಂಟೋ, ಸಿ. ಮೋಹನ ಮತ್ತು ಎಸ್. ಜಯರಾಮ ಇವರ ನಿರಂತರ ಕ್ರಿಯಾಶೀಲತೆ ನನಗೆ ಹೆಮ್ಮೆ ನೀಡಿದೆ. ಮೊದಲಿನ ಮೂವರು ೧೯೬೭ರ ಜುಲೈ, ಆಗಸ್ಟ್ ತಿಂಗಳುಗಳಲ್ಲಿ ಹಿಮಾಲಯದ ಕುಲ್ಲುಪುಮೋರಿ ದುರ್ಗಮ ಶಿಖರಾರೋಹಣ ಸಾಹಸದಲ್ಲಿ ಯಶಸ್ವಿಯಾಗಿ ಭಾಗಿಗಳಾಗಿ ವಿಶ್ವವಿಕ್ರಮ ಸಾಧಿಸಿದ್ದಾರೆ. ನಮ್ಮ ರಾಜ್ಯಕ್ಕೇ ಕೀರ್ತಿ ತಂದಿದ್ದಾರೆ.

ಕುದುರೆಮುಖ ಸಾಹಸವು ಅದರ ಉದ್ದೇಶವನ್ನು ಸಮರ್ಥವಾಗಿ ಸಫಲಗೊಳಿಸಿದೆ. ವಿದ್ಯಾರ್ಥಿಗಳ ಕ್ರಿಯಾತ್ಮಕ ಚಟುವಟಿಕೆಗಳಿಗೆ ಅದು ಒಂದು ನೂತನ ಪರಿಮಾಣವನ್ನು ನೀಡಿದೆ. ಅದರಲ್ಲಿ ಭಾಗಿಗಳಾಗಿದ್ದ ಎಲ್ಲ ಕ್ಯಾಡೆಟ್ಟುಗಳೂ ಹಿಮಾಲಯ ಮುಂತಾದ ಸಾಹಸಗಳಲ್ಲಿ ಪಾಲುಗೊಂಡು ತಮ್ಮ ಹಿರಿಮೆಯನ್ನು ಸಾಧಿಸಿದ್ದಾರೆ. ನಮ್ಮ ಯುವಕ ಯುವತಿಯರು ಸಾಹಸಪ್ರಿಯರು, ಸತ್ತ್ವಶಾಲಿಗಳು. ಅವರೊಡನೆ ನಿಕಟ ಸಂಪರ್ಕದಿಂದ ಅವರ ಕಷ್ಟ ಸಹಿಷ್ಣುತೆ, ಶಿಸ್ತು, ಸೌಜನ್ಯಗಳನ್ನು ನಾನು ಮೆಚ್ಚಿಕೊಂಡಿದ್ದೇನೆ. ಕ್ರಮಬದ್ಧವಾಗಿ ನಿಯೋಜಿಸಿದ ಸಾಹಸ ಕಾರ್ಯಗಳಲ್ಲಿ ಅವರ ಮೌಲ್ಯಗಳು ಪ್ರಸಿದ್ಧಿಗೆ ಬರುವುವು. ಈ ದಾರಿಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಒಂದು ಹೊಸ ದಾರಿಯನ್ನು ತೋರಿಸಿಕೊಟ್ಟಿದೆ.

ಈ ಪುಸ್ತಕವನ್ನು ಆತ್ಮೀಯತೆಯಿಂದ ಬರೆದು ಕೊಟ್ಟಿರುವ ಮೇಜರ್ ಜಿ.ಟಿ. ನಾರಾಯಣರಾಯರನ್ನು, ಶಿಬಿರಕ್ಕೆ ವಿವಿಧ ಸೌಕರ್ಯಗಳನ್ನು ಒದಗಿಸಿಕೊಟ್ಟ ಸರಕಾರದ ವೈದ್ಯ ಮತ್ತು ಅರಣ್ಯ ಇಲಾಖೆಗಳ ಅಧಿಕಾರಿಗಳನ್ನು, ಶಿಬಿರದ ವೈದ್ಯರಾಗಿ ನಮಗೆ ನೆರವಾದ ಡಾ। ಜಿ.ಎನ್. ಪೂಜಾರರನ್ನು, ಬೆಂಗಳೂರಿನ ಎನ್ಸಿಸಿ ಗ್ರೂಪ್ ಹೆಡ್ ಕ್ವಾರ್ಟರ್ಸ್ ಎ ಮತ್ತು ಮಂಗಳೂರಿನ ಎನ್ಸಿಸಿ ಗ್ರೂಪ್ ಹೆಡ್ ಕ್ವಾರ್ಟರ್ಸ್‌ನ ಅಧಿಕಾರಿಗಳನ್ನು ಧರ್ಮಸ್ಥಳದ ಶ್ರೀ ರತ್ನವರ್ಮ ಹೆಗ್ಗಡೆಯವರನ್ನು ಮತ್ತು ನಮ್ಮ ಬೆಟಾಲಿಯನ್ನಿನ ಕ್ಯಾಪ್ಟನ್ ಹೆಚ್. ಎನ್. ಅಶ್ವತ್ಥನಾರಾಯಣರವರನ್ನು, ಸುಬೇದಾರ್ ಖಾನ್ವಿಲ್ಕರರನ್ನು ನಾನು ಅಭಿವಂದಿಸುತ್ತೇನೆ.

ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಡಾ। ರಂ. ಶ್ರೀ. ಮುಗಳಿಯವರು ಈ ಪುಸ್ತಕವನ್ನು ಅಮೂಲಾಗ್ರವಾಗಿ ಓದಿ ಸೂಕ್ತ ಸಲಹೆ ನೀಡಿದ್ದಾರೆ. ಇವರ ಮಾರ್ಗದರ್ಶನವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ವಿಶ್ವವಿದ್ಯಾಲಯದ ರಿಜಿಸ್ಟ್ರಾರರಾಗಿರುವ ಶ್ರೀ ಪಿ. ಮಲ್ಲಿಕಾರ್ಜುನಪ್ಪನವರು, ಕುದುರೆಮುಖ ಸಾಹಸದ ಮತ್ತು ಈ ಪುಸ್ತಕದ ಪ್ರಕಟಣೆಯ ಪ್ರತಿಯೊಂದು ಹಂತದಲ್ಲಿಯೂ ಆತ್ಮೀಯತೆಯಿಂದ ನೆರವು ನೀಡಿ ಪ್ರೋತ್ಸಾಹಿಸಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು.

ಈ ಪುಸ್ತಕವು ನಮ್ಮ ತರುಣ ಜನಾಂಗವು ಸಾಹಸೋದ್ಯಮಗಳನ್ನು ಕೈಗೊಳ್ಳುವಂತೆ ಪ್ರಚೋದನೆ ನೀಡಿದರೆ ಇದರ ಉದ್ದೇಶ ಸಫಲವಾಗಿದೆಯೆಂದು ತಿಳಿಯುತ್ತೇನೆ. ಕ್ರಮಬದ್ಧ ಪರಿಶ್ರಮ, ಗುರಿಯೆಡೆಗೆ ನಡೆಯುವ ಹಟ ಇಲ್ಲದೆ ಯಾವ ಸಾಹಸವೂ ಸಾಧ್ಯವಿಲ್ಲ ಎಂದು ಅವರು ತಿಳಿಯಬೇಕು. ನಮ್ಮ ದೇಶದ ಯುವಕ ಯುವತಿಯರ ಶ್ರೇಯಸ್ಸನ್ನು ಸದಾ ಹಾರೈಸುತ್ತೇನೆ.

# ಸಾಹಸಯಾತ್ರೆಯಲ್ಲಿ ಪ್ರಾಧ್ಯಾಪಕ-ಅಧಿಕಾರಿಯಾಗಿ ಭಾಗಿಯಾದ ಕೆ.ಎನ್. ಶಿವಪ್ಪನವರ ಕುದುರೆಮುಖ

ಸಿರಿಮೊಗನ ನೆತ್ತಿಗೇರುವ ಮುನ್ನ
ಪಾದ ಬಳಿ ಬಂದಾಗ,
ತಾರುಣ್ಯ ಹೊಸ್ತಿಲಲಿ ನಲಿವ ಸಿರಿಕನ್ನೆಯಂತೆ ದಟ್ಟ ಕಾಡು.
ಜೀವ, ಗದ್ದಲದ ಹೆಗ್ಗಲ್ಲಿನಡಿಯಲ್ಲಿ ಸಿಕ್ಕಿ
ಬಿಡುವಿರದ ಜಡಿಮಳೆಯ ರೇಜಿಗೆ ಬಿದ್ದು
ಮುಕ್ಕಾದ ಮನಸ್ಸು ಕಿಚ್ಚುಗೊಂಡ ಕಾಡಿನಲಿ
ಪಕ್ಷಿ ನಿರ್ಮಿತ ಭಾಷಾಕೂಜನವನಾಲಿಸಿದೆ.
ಒಲಿದವಳ ಮೆದುಹೆಜ್ಜೆ ಸಪ್ಪಳವ ಹೊತ್ತ ಮಾರುತ
ಭೂರಂಗದೊಳಹೊರಗು ಹೂಗಂಧ ಚೆಲ್ಲುತ್ತ,
ಮುಂಗೊಂಡು ಮುತ್ತುತ್ತ ಬಳಿಸಾರಿ ತಬ್ಬುತ್ತ
ನೊಂದ ಎದೆಗೋ ಎಂಬಂತೆ ಪಿಸುಗುಡುತಲಿತ್ತು.
ಹಳತು ಹೊಸತಿದು ಎಂಬ ಭಾಷೆಗಳ ಭ್ರಮೆಯಿರದ
ಪಕ್ವ ಇಲ್ಲವೆ ಹಸಿಯ ಕಾಮಗಳ ಗೋಜಿರದ
ತಮ್ಮಲ್ಲಿ ತಾವಾಗಿ ಮೈಮರೆವ ಮಗುವಾಗಿ
ಜನಜಾಗೃತಿಯ ಸ್ಮೃತಿಯ ವೈತರಣಿಯಲಿ ಮುಳುಗಿ ಹೊರಬರುವ ಮೊದಲು
ನಲಿವ ಹಳೆಯ ಬುಡಕಟ್ಟುಗಳ ಕಂಡಂತೆ,
ಸೃಷ್ಟಿಯಾದಂದೆ ಹೊರಬಂದ ಬಿಸಿಪಾಕವೆಂಬಂತೆ
ಕರೆವ ತುರಗಮುಖನಂತಿರುವ ಗಿರಿಸಖನ ಕಂಡೆ.
ಕವಿ, ಶಿಲ್ಪಿ, ಕಲೆಗಾರ ಅನುಭವದ ಮೋಕ್ಷಗಳಿಸುವ ಮುನ್ನ
ಅರಣ್ಯಾವಸ್ಥೆಯಲಿ ಬಿದ್ದಂತೆ,
ಕಂಡರಿಸದ ಬೋಳು ಗೊಮ್ಮಟನ ಕಲೆಯಂತೆ ನಿನ್ನ ನೆಲೆ,
ಜಾಂಬವನಂತೆ ದ್ವಾಪರವ ದಾಟಿ ಕಲಿಯಲ್ಲಿ ನಿಂತಾಗ
ಈ ಶತಮಾನದಂಚು ಕಾಯಿಸಿದ ಭೂತ ಸಮಸ್ಯೆಗಳ ಮುಂದಿಟ್ಟು
ಪರಿಹಾರವೇನು ಏನೆಂದು ಪ್ರಶ್ನಿಸಿದ ನಾನೊಬ್ಬ
ಪತ್ರಿಕೋದ್ಯಮಿಯಂತೆ ಸೊಟ್ಟ ಸೊಟ್ಟಗೆ ನಿಂತಿದ್ದೆ.
ದೊಡ್ಡ ಬಾಯಿಯ ತೆರೆದು ಉತ್ತರಿಸುವ ಮೊದಲು
ತುಟಿ ಬಿಗಿದ ನೀನು ಒಳಗೆ ಚಿಂತಿಸುತ್ತಿದ್ದೆ.
ವಿಜಯೋತ್ಸಾಹಗಳ ಸವಿನೆನಪ ಮೆಲುಕುತ್ತ
ಮುಪ್ಪಿನಲಿ ಕತ್ತಿಮೇಲೆತ್ತಲಾಗದ ನೀನು
ಸಮುದ್ರವನೆ ಕಂಡು ತಳಮಳಿಸುತಿರಬಹುದು.
ಹುಚ್ಚೆದ್ದ ಭಾವಗಳ ಸಮುದಾಯ ಕುಣಿವಾಗ ನಿನ್ನೆತ್ತರಕೆ ಹೊರಟೆ.
ನಾ ಏರಲಣಿಯಾದೆ.
ಮಾದೇಶ್ವರನ ಬೆಟ್ಟಕ್ಕೆ ಏರಿದಂತಲ್ಲ
ಏಳುಮಲೆಗಳ ದಾಟಿ ತಿರಿದು ತಿರುಪತಿಯ ಕಾಣ ಹೊರಟಂತಲ್ಲ
ಮೇಲಿದ್ದು ಕೈ ಬೀಸಿ ಕರೆವ ರಸಋಷಿಯಂತೆ ನಿನ್ನ ಕರೆ
ಅಂಬ ಅಂಬಾ ಎಂದು ಅರಚಿ ರಿಂಗಣಗುಣಿವ ನನ್ನ ಮೊರೆ –
ಕಿರಣ ತಾಕದ ಆ ಕಿರುದಾರಿಯಲ್ಲಿ
ಪಾತಾಳಕಿಳಿವಂತೆ ಕೊರಕಲಿಗೆ ಇಳಿದು

ಮೈ ಕೊರೆವ ನೀರ್ ಕುಡಿದು
ಮೇಲೇರಿ,
ನಡುನಡುವೆ ಸುಳಿವ ಕಾಡುಕೋಣಗಳ ಕಾಟ
ಶರೀರ ಭಯದಾಟ, ದಾಟಿ
ಪಂಚ ಕುರಿಗಳ ಹಿಡಿದು
ನಡೆವ ಸಂಯಮದ ನಡಿಗೆ
ಅದೆ ನಿನ್ನೆಡೆಗೆ.
ಏರುತ್ತ ಏದುತ್ತ ತಂಗುತ್ತ ತಡವುತ್ತ
ನೆಲದ ಮಗು ವಾಸನೆ ಕಡಿದು
ತುತ್ತ ತುದಿ ಮುಟ್ಟಿ
ಅಳಿದುಳಿದು ಸತ್ವದಲಿ ಮೇಲೆದ್ದು ನಿಂತಾಗ
ಕಾಡು ಕಾಡೋ ಹೆಗ್ಗಾಡು:
ಚಂದ್ರ ಬಿಂಬದ ದ್ವಾರ ಫಕ್ಕನೆ ತೆರೆದಂತೆ.
ಅಚ್ಚಹಸಿರಿನ ನಡುವೆ ಮೂಡಿತಾನಂದ
ಆಡಿ ಅಡ್ಡಾಡಿದರು ದಣಿಯದಾಯಿತು ತಣಿವು.
ಲೋಕಚಕ್ರವು ಕಾದು ಪಡುಗೆರೆಗೆ ಹೂತಂತೆ
ಮುಚ್ಚಂಜೆ ಸರಿದಾಗ
ನಾ ಏರಿದಾಗ
ದೂರದಲಿ ಬೆಂಕಿ ತುಣುಕೊಂದ ಕಂಡೆನೆನುವಷ್ಟರಲೆ
ಮಾಲೆ ಹಾಕಿತು ಬೆಂಕಿ.
ರುದ್ರ ಮನೋಹರ ದೃಶ್ಯ ಎನುವಷ್ಟರಲೆ,
ಬೆಳಕು ಬೆರತಂತೆ
ಕುಡಿಕೆಯಾ ನೀರು ಸಾಗರಕೆ ಸಂದಂತೆ
ಅಲ್ಲಿ, ನಾನಿಲ್ಲವಾದೆ!

# ಕುದುರೆಮುಖದೆಡೆಗೆ ಹೋದವರು



ಕುದುರೆಮುಖ ಸಾಹಸದ ವೀರರಿಗೆ ಪದವೀದಾನ ಸಮಾರಂಭ. ಪದ್ಮಶ್ರೀ ಡಾ. ವಿ. ಕೆ. ಗೋಕಾಕರು ಮುಖ್ಯ ಅತಿಥಿಗಳು. ಏರ್ ಕಮ್ಮೊಡೋರ್ ಎಸ್. ಕೆ. ಬಕ್ಷಿ, ಪ್ರಿನ್ಸಿಪಾಲ್ ಆರ್. ಆರ್. ಉಮರ್ಜಿ ಉಪಕುಲಪತಿಗಳ ಉಭಯ ಪಾರ್ಶ್ವಗಳಲ್ಲಿ ಕುಳಿತಿದ್ದಾರೆ.

ಮೇಜರ್ ಎಂ. ಆರ್. ನಾರಾಯಣ್ ಸಿಂಗ್ – ನಾಯಕರು

ಮೇಜರ್ ಜಿ.ಟಿ. ನಾರಾಯಣ ರಾವ್ – ಉಪನಾಯಕರು

ಲೆಫ್ಟಿನೆಂಟ್‌ಗಳಾದ ಕೆ. ಎಸ್. ನಿಸಾರ್ ಅಹಮದ್, ಕೆ. ಎನ್. ಶಿವಪ್ಪ, ಎಸ್. ಕೆಂಡಗಣ್ಣ ಸ್ವಾಮಿ – ಆಫೀಸರರು

ಸುಬೆದಾರ್ ವಸಂತ್ ಖಾನ್ವಿಲ್ಕರ್, ಹವಾಲ್ದಾರ್ ಸೈಯದ್ ಹರೂನ್, ಹವಾಲ್ದಾರ್ ಗ್ಯಾನ್ ಸಿಂಗ್, ನಾಯಕ್ ಹಂಬೀರಾವ್ ಝೂಂಬ್ರೆ – ಸೈನ್ಯ ಖಾತೆಯ ಅಧಿಕಾರಿಗಳು

Suoಗಳಾದ ಎ. ಲಕ್ಷ್ಮೀನಾರಾಯಣ, ವಿ. ಜೆ. ಪಿಂಟೋ, ಸಿ. ಮೋಹನ ಮತ್ತು ಎಸ್. ಜಯರಾಮ – ವಿದ್ಯಾರ್ಥಿ ಶಿಕ್ಷಕರು

ಇತರ ಕ್ಯಾಡೆಟ್ಟುಗಳು

Suo.ಎಂ. ಬಾಬಾಪ್ರಸಾದ್, Uo.ಗಳಾದ ಆರ್. ವಾಸುದೇವ, ಎನ್. ನಾಗರಾಜರಾವ್, Csm.ಗಳಾದ ಕೆ. ತಿಮ್ಮಪ್ಪ, ವಿ. ಶ್ರೀಧರನ್, Sgt.ಗಳಾದ ಟಿ. ವೆಂಕಟೇಶ್, ಎ. ವಿ. ಶ್ರೀನಿವಾಸರಾವ್, ಎನ್.ವಿ. ಶ್ರೀಧರ, ಎಂ. ಆರ್. ಗಂಗಾಧರ, ಬಿ. ಆರ್. ಶರಚ್ಚಂದ್ರ, ಜಯರಾಜ ಸ್ಟೀಫನ್ಸ್, Cqsm ಎಂ. ಅಣ್ಣಯಪ್ಪ, Cpl. ಗಳಾದ ಯು.ಡಿ. ಕಾವೇರಿಯಪ್ಪ, ವಿ. ಲಕ್ಷ್ಮೀನಾರಾಯಣ, ರಮೇಶಚಂದ್ರ ಗುರು, ಎಂ. ಪ್ರಭಾಕರ ರೆಡ್ಡಿ, ಎನ್. ನರಸಿಂಹಯ್ಯ, ವಿ. ರಾಮಕೃಷ್ಣ ರಾವ್, ಪಿ. ಬಿ. ರಾಮಪ್ರಸಾದ, ಕೆ. ಅನಂತರಾಜು, ಎನ್. ಎಸ್. ಜಗನ್ನಾಥ ಶಾಸ್ತ್ರಿ, ಜಿ. ಟಿ. ಕರಿತಿಮ್ಮಯ್ಯ, ರಂಗನಾಥ್ ರಾವುತ್, Lcpl. ಸಿ. ಕೃಷ್ಣಪ್ಪ, ಜಿ. ರಾಮರೆಡ್ಡಿ, ನಾರಾಯಣ Cdt. ಎನ್. ರಾಮಶಿವಣ್ಣ, ಚಿಕ್ಕಮಲ್ಲೇಗೌಡ, ಪಿ.ಕೆ. ಚಂದ್ರಶೇಖರ ಬಾಬು, ಕೆ.ಎ. ಸೋಮಯ್ಯ, ಬಿ.ಟಿ. ಲಕ್ಷ್ಮಣ, ಎಚ್. ನಾಭೂಷಣ ಹಂದೆ.

ಎಂ. ಎ. ಅನ್ಸಾರಿ ಮತ್ತು ಲಿಂಗೋಜಿ ರಾವ್ – ಲಾರಿ ಚಾಲಕರು

ಕಣ್ಣನ್ – ಎಟೆಂಡರ್, ಕೃಷ್ಣಮೂರ್ತಿ ಮತ್ತು ನಾರಾಯಣರಾವ್ – ಅಡುಗೆಯವರು.

# ಒರತೆಯ ಉಗಮ

## ಅಧ್ಯಾಯ ಒಂದು



ಬೆಂಗಳೂರಿನ ಸರಕಾರೀ ಕಾಲೇಜಿನ ವಿದ್ಯಾರ್ಥಿಗಳಿಗೆ ಎನ್‌ಸಿಸಿ ಶಿಕ್ಷಣವೀಯುವ ಸಂಸ್ಥೆಯ ಹೆಸರು ೧೨ನೇ ಮೈಸೂರು ಬೆಟಾಲಿಯನ್ ಎನ್‌ಸಿಸಿ ಎಂದು ಹಿಂದೆ ಹೇಳಿದ್ದೇನೆ. ಸುಮಾರು ೧೨೦೦ ಕ್ಯಾಡೆಟ್ಟುಗಳಿರುವ ಈ ಬೆಟಾಲಿಯನ್ ದಕ್ಷ ಮತ್ತು ಸಮರ್ಥ ವ್ಯವಹಾರಕ್ಕೆ ಮತ್ತು ನವಸಾಹಸ ಪ್ರದರ್ಶನಕ್ಕೆ ರಾಜ್ಯದಲ್ಲಿಯೇ ಪ್ರಸಿದ್ಧವಾಗಿತ್ತು. ಕಾಲೇಜು ಮತ್ತು ಎನ್‌ಸಿಸಿ ಸಂಸ್ಥೆ ಇವುಗಳ ಅಧಿಕಾರಿಗಳ ಸುಮಧುರ ಬಾಂಧವ್ಯ ಸಹಕಾರಗಳಿಂದ ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿ ಸಾಧ್ಯವಾಗಿತ್ತು.

ಈ ಬೆಟಾಲಿಯನ್ನಿನಲ್ಲಿ ವಿವಿಧ ಅಖಿಲ ಭಾರತೀಯ ಎನ್‌ಸಿಸಿ ಕ್ಯಾಂಪುಗಳಿಗೆ ಹೋಗಿ ಶಿಕ್ಷಣ ಪಡೆದು ವಿಜಯಶಾಲಿಗಳಾಗಿ ಕೀರ್ತಿ ತಂದ ಕ್ಯಾಡೆಟ್ಟುಗಳು ಬಲುಮಂದಿ ಇದ್ದರು. ಇಂಥ ಕ್ಯಾಂಪುಗಳಲ್ಲಿ ಸುಪ್ರಸಿದ್ಧವಾದದ್ದು ಡಾರ್ಜಿಲಿಂಗ್ ಮತ್ತು ಮನಾಲಿಯಲ್ಲಿಯ ಹಿಮಾಲಯ ಪರ್ವತಾರೋಹಣ ಸಂಸ್ಥೆಗಳು ನಡೆಸುವ ಪರ್ವತಾರೋಹಣ ಶಿಬಿರಗಳು. ನಮ್ಮ ಬೆಟಾಲಿಯನ್ನಿನಲ್ಲಿ, ಇಂಥ ಶಿಬಿರ ಭಾಗಿಗಳಾಗಿ ಮರಳಿದವರ ಸಂಖ್ಯೆ ಹತ್ತನ್ನು ಮೀರಿತ್ತು. ಇತರ ಯಾವ ಬೆಟಾಲಿಯನ್ನಿನಲ್ಲೂ ಇಷ್ಟೊಂದು ಪ್ರಮಾಣದಲ್ಲಿ ಕ್ಯಾಡೆಟ್ಟುಗಳು ಕೇಂದ್ರೀಕೃತವಾಗಿರಲಿಲ್ಲ. ಇವರೆಲ್ಲರೂ ಚೈತನ್ಯದ ಬುಗ್ಗೆಗಳು. ಇವರು ತಮ್ಮ ಸಾಹಸ ಪ್ರದರ್ಶನ ಕತೆಗಳನ್ನು ರಂಗುರಂಗಾಗಿ ವರ್ಣಿಸುತ್ತಿದ್ದಾಗ ಸೋಮಾರಿಗಳೂ ನಿದ್ದೆಗಣ್ಣರೂ ಕಿವಿನಿಮಿರಿಸಿ ಆಲಿಸುತ್ತಿದ್ದರು. ಹಿಮಾಲಯದ ಪ್ರಕೃತಿ ಸೌಂದರ್ಯ, ಹಿಮಗಡ್ಡೆಗಳ ಚಿರನೂತನ ರುದ್ರ ಗಾಂಭೀರ್ಯ, ಆ ಪ್ರಪಾತಗಳ ಗಭೀರತೆ, ಅವನ್ನು ಇಳಿದು ಏರಿ ಎತ್ತರ ಎತ್ತರಕ್ಕೆ ಹೋಗುವ ಪ್ರತಾಪ, ಪ್ರಪಾತಗಳನ್ನು ನೈಲಾನ್ ಹಗ್ಗಗಳ ಸಹಾಯದಿಂದ ಜಿಗಿದಿಳಿಯುವ ರೋಮಾಂಚಕ ಅನುಭವ – ಒಂದೇ ಎರಡೇ – ಹಿಮಾಲಯ ಎಷ್ಟು ಎತ್ತರವೊ ಬಿತ್ತರವೊ ಅಲ್ಲಿಯ ಅನುಭವವೂ ಅಷ್ಟೇ.

"ನಾನೆಂದು ಅಲ್ಲಿಗೆ ಹೋಗುವುದು?" ಈ ಪ್ರಶ್ನೆ ಪ್ರತಿಯೊಬ್ಬನ ಮುಂದೆಯೂ ಎದ್ದು ನಿಲ್ಲುತ್ತಿತ್ತು. ಆದರೆ ನಮಗೆ ದೊರೆಯುತ್ತಿದ್ದ ಅವಕಾಶ ಮತ್ತು ಸ್ಥಾನಗಳು ವರ್ಷಕ್ಕೆ ಮೂರು ಅಥವಾ ನಾಲ್ಕು. ಹೋಗಲು ಬಯಸುತ್ತಿದ್ದವರ ಸಂಖ್ಯೆ ನೂರಾರು. ಏನೇ ಇರಲಿ, ಸಾಹಸಪ್ರವೃತ್ತಿ ನಮ್ಮ ಹುಡುಗರಲ್ಲಿ ಭದ್ರವಾಗಿ ಬೇರೂರಿತ್ತು. ಪಂಗುಗಳೂ ಗಿರಿಲಂಘನ ಮಾಡಲು ಉತ್ಸುಕರಾಗಿದ್ದರು! 'ಪಂಗುಂ ಲಂಘಯತೇ ಗಿರಿಂ!'

ಆಡಳಿತೆಯ ಮತ್ತು ಶಿಕ್ಷಣದ ಸೌಕರ್ಯಕ್ಕಾಗಿ ನಮ್ಮ ಬೆಟಾಲಿಯನ್ನನ್ನು ಎಂಟು ತಂಡಗಳಾಗಿ ವಿಂಗಡಿಸಲಾಗಿತ್ತು. ಪ್ರತಿಯೊಂದು ತಂಡದ ಹೆಸರು ಕಂಪೆನಿ. ಕಂಪೆನಿಯ ಮೇಲಧಿಕಾರಿ ಒಬ್ಬ ಎನ್‌ಸಿಸಿ ಆಫೀಸರ್ (ಈತ ಕಾಲೇಜಿನಲ್ಲಿ ಲೆಕ್ಚರರೂ ಹೌದು). ಇವರೆಲ್ಲರ ಮೇಲೆ ಬೆಟಾಲಿಯನ್ ಕಮಾಂಡಿಂಗ್ ಆಫೀಸರ್. ಇವರು ಸೈನ್ಯದಿಂದ ಈ ಕೆಲಸ ನಡೆಸಲು ನಿಯೋಜಿತರಾಗಿ ಬಂದವರು.

ಪ್ರತಿ ಆರೋಗ್ಯವಂತ ಕಾಲೇಜು ವಿದ್ಯಾರ್ಥಿಯೂ ಕಡ್ಡಾಯವಾಗಿ ಎನ್‌ಸಿಸಿ ಶಿಕ್ಷಣ ಪಡೆಯಲೇಬೇಕೆಂಬುದು ಅಂದಿನ (೧೯೬೬) ನೀತಿ. ಕಡ್ಡಾಯದ ಗುಡಿಯಲ್ಲಿ ಮೊದಲ ಬಲಿ ಕುತೂಹಲ. ಮನುಷ್ಯ ಅಲ್ಲಿ ಯಾಂತ್ರಿಕತೆಯ ನೀರಸ ಕ್ರಿಯೆ ನಡೆಸಲು ತೊಡಗುತ್ತಾನೆ. ಪೆರೇಡಿನಲ್ಲಿ ನನ್ನ ಅನುಭವ ಇದು – ಕುತೂಹಲವಿರುವ ಕೆಲವರನ್ನು ಇಲ್ಲದಿರುವ ಹಲವರ ಜತೆಗೆ ಸೇರಿಸಿ ಶಿಕ್ಷಣವೀಯುವಾಗ ಇಲ್ಲದವರು ಇದ್ದವರನ್ನೂ ಕೆಡಿಸುತ್ತಿದ್ದ ಸಂದರ್ಭಗಳೇ ಹೆಚ್ಚು. ಗ್ರೆಷಾಮ್ ನಿಯಮ ಪ್ರತ್ಯಕ್ಷವಾಗುತ್ತಿತ್ತು. "ಕಪ್ಪು ಹಣ ಬಿಳಿ ಹಣವನ್ನು ಮಲಿನಗೊಳಿಸುತ್ತದೆ." ಆದ್ದರಿಂದ ಕುತೂಹಲಿಗಳಿಗೆ ಪ್ರತ್ಯೇಕವಾದ, ಕಡ್ಡಾಯವಲ್ಲದ, ವಿಶೇಷ ಶಿಕ್ಷಣವೀಯಲು ಒಂದು ಸ್ಪೆಶಲ್ ಕಂಪೆನಿ ತೊಡಗಬೇಕು ಎಂದು ಮೇಲಧಿಕಾರಿಗಳು ಮನಗಂಡರು. ಹೀಗೆ ನಮ್ಮ ಬೆಟಾಲಿಯನ್ನಿನಲ್ಲಿಯೂ ಸ್ಪೆಶಲ್ ಕಂಪೆನಿ ಆರಂಭವಾಯಿತು. ಸ್ವಂತ ಇಚ್ಛೆಯಿಂದ ಬರುವವರಿಗೆ ಮಾತ್ರ ಇಲ್ಲಿ ಪ್ರವೇಶ. ಇಲ್ಲಿಯ ಶಿಕ್ಷಣವೂ ಹೊಸತು, ಹುಡುಗರ ಸಹಜ ಸಾಹಸ ಪ್ರವೃತ್ತಿಯನ್ನು ವಿಕಾಸಗೊಳಿಸಲು ಪ್ರೇರಕವಾಗುವಂಥದು.

ಪ್ರತಿ ಆದಿತ್ಯವಾರ ಬೆಳಗ್ಗೆ ಪೆರೇಡು. ಹುಡುಗರೇನೋ ಬಂದರು. ಆದರೆ ಅವರಿಗೆ ಕುತೂಹಲಜನಕ ನೂತನ ಉಪಯುಕ್ತ ಶಿಕ್ಷಣ ಏನನ್ನು ನೀಡುವುದು? ಇದು ನಮ್ಮ ಎದುರಿದ್ದ ದೊಡ್ಡ ಪ್ರಶ್ನೆ. ಬೇಡ ಎಂದು ಅವರನ್ನು ನಿವಾರಿಸುವುದು ಬಲು ಸುಲಭ; ಬೇಕು ಎಂದು



ನಡೆಸುವುದು ಪ್ರಯಾಸಕರ. ಸ್ವಲ್ಪ ಕಾಲ ಪೌರ ರಕ್ಷಣೆಯನ್ನು ಬೋಧಿಸಿದೆವು. ಆದರೆ ಏಕೋ ಜೀವಸ್ಪಂದನವಾಗಲಿಲ್ಲ. ಒಂದೆರಡು ವಾರ ಬಯಲು ಗುಡ್ಡ ಅಲೆದು ಬಂದೆವು. ಆದರೆ ಎಲ್ಲೆಲ್ಲಿಯೂ ಜನಪ್ರವಾಹ, ಕೊಳಕು ಹರಿಯುತ್ತಿದ್ದ ನಗರದಲ್ಲಿ ಇದೂ ರುಚಿಸಲಿಲ್ಲ. ಕ್ರಮರಹಿತ ಅಲೆದಾಟ ದಣಿವಿಗೆ ಆಹ್ವಾನ. ಇಷ್ಟಾಗುವಾಗ ಆಗಸ್ಟ್ ೧೯೬೬ ಉರುಳುತ್ತಿತ್ತು. ನಮ್ಮ ಹಿರಿಯ ಹುಡುಗರು ಪಿಂಟೋ, ಬಾಬಾ, ಶ್ರೀಧರನ್ ಮೊದಲಾದವರು ಒಂದು ಬೆಳಗ್ಗೆ ನನ್ನನ್ನು ಕಂಡು ಸೂಚಿಸಿದರು, "ನಮ್ಮ ಸ್ಪೆಶಲ್ ಕಂಪೆನಿ ಶಿಲಾರೋಹಣ ಶಿಲಾವರೋಹಣ ಕಲೆಯನ್ನೇಕೆ ಕಲಿಸಬಾರದು?" ಇಂಗ್ಲಿಷಿನಲ್ಲಿ ಮಾತಾಡಿದ ಅವರು ಬಳಸಿದ ಪದಗಳು ದೊಡ್ಡವು: rock climbing and rock rappling. ಸರಳ ಕನ್ನಡದಲ್ಲಿ ಬಂಡೆ ಏರುವುದು, ಬಂಡೆ ಇಳಿಯುವುದು. ಬಂಡೆಯೂರಿನವ ನಾನು. ದಿನಬೆಳಗಾದರೆ ಎರಡು ಬಂಡೆಗಳ ಮಂಡೆ ಏರಿ ತುಳಿದು ಇಳಿಯದೇ ಒಂದೆಡೆಯಿಂದ ಇನ್ನೊಂದೆಡೆಗೆ ಹೋಗುವಂತಿರಲಿಲ್ಲ. ಅಷ್ಟೇಕೆ ಮನೆ ಹಂಡೆಗೆ ನೀರು ತರಬೇಕಾದರೆ ಬಂಡೆಯ ಬುಡಕ್ಕೆ ಇಳಿಯಲೇಬೇಕಿತ್ತು.

"ಅದೂ ಒಂದು ಕಲೆಯೇ?" ಎಂದು ಸ್ವಾಭಾವಿಕ ಆಶ್ಚರ್ಯದಿಂದ ಕೇಳಿದೆ.

"ಈ ಆದಿತ್ಯವಾರ ಪ್ರಯತ್ನಿಸೋಣ ಸರ್. ನಾವು ಕೆಲವರು ಹಿಮಾಲಯದಲ್ಲಿ ಕಲಿತವರಿದ್ದೇವೆ. ನಮಗೂ ಒಂದು ರಿಫ್ರೆಶರ್ ಆದ ಹಾಗಾಯಿತು" ಎಂದು ಪಿಂಟೋ ಹೇಳಿದ.

"ಯಾವುದನ್ನೂ ನಾವು ಕ್ರಮಬದ್ಧವಾಗಿ ಮಾಡಬೇಕು. ಆದ್ದರಿಂದ ಯಾರಿಗೆಲ್ಲ ಈ ವಿಚಾರದಲ್ಲಿ ಕುತೂಹಲವಿದೆಯೋ ಅವರೆಲ್ಲ ನಾಳೆ ಸಾಯಂಕಾಲ ಕಾಲೇಜಿನ ಹಿಂದಿರುವ ಕಲ್ಲು ಬಂಡೆಗಳ ಮೇಲೆ ಸಭೆ ಸೇರಬೇಕು. ಮುಂದಿನ ಮಾರ್ಗ ಯೋಚಿಸೋಣ" ಎಂದೆ.

ಮರುದಿನ ಸಾಯಂಕಾಲ ಬಂಡೆಗಳ ಮೇಲೆ ಕುಳಿತವರು ನಾವೊಂದಿಪ್ಪತ್ತು ಜನ. ಮಾತುಭಾರಿ ಪಿಂಟೋ ಶಿಲಾರೋಹಣವನ್ನು ಕುರಿತು ಪದ ಉರುಳಿಸಿದ. ಉಳಿದವರಿಗೆ ಅರ್ಥವಾಯಿತೋ ಇಲ್ಲವೋ ನನಗಂತೂ ಆಗಲಿಲ್ಲ. ತಲೆದೂಗಿದರು. ಏನಾದರೂ ಮಾಡಲೇಬೇಕೆಂಬ ಉತ್ಸಾಹದ ಅಮಲಿನಲ್ಲಿ ಅವರಿಗೆ ಹಿಮಾಲಯ ಪರ್ವತವೊಂದೇ ಎಲ್ಲ ಮಾತಿನ ಹಿನ್ನೆಲೆಯಲ್ಲಿಯೂ ಕಾಣುತ್ತಿತ್ತು. ಅಂತೂ ಮುಂದಿನ ಆದಿತ್ಯವಾರದಿಂದ ನಾವು ಶಿಲಾರೋಹಣ ಸಾಹಸ ಕಾರ್ಯ ತೊಡಗುವುದೆಂದು ನಿರ್ಧರಿಸಿದೆವು.

"ಹಾಗಾದರೆ" ಎಂದು ನಾನು ಸಮಾರೋಪ ಭಾಷಣ ಬಿಗಿದೆ, "ಮುಂದಿನ ಆದಿತ್ಯವಾರ ಬೆಳಗ್ಗೆ ೬.೪೫ ಗಂಟೆಗೆ ನಾವಿಲ್ಲಿ ಸೇರುವುದು, ಮುಂದುವರಿಸುವುದು. ಪಿಂಟೋ, ಬಾಬಾ, ಶ್ರೀಧರನ್ ಮುಂದಾಳುಗಳು. ಉಳಿದವರು ಅವರ ಅನುಯಾಯಿಗಳು. ನಾನು ನಿಮ್ಮೆಲ್ಲರ ಹಿಂದೆ; ಮುಂದೆ ಅಲ್ಲ. ಇಲ್ಲಿ ಸೇರಿರುವ ನಾವೆಲ್ಲರೂ ಸ್ವಯಂಸ್ಫೂರ್ತಿಯಿಂದ ಬಂದವರು ಎಂದು ಚೆನ್ನಾಗಿ ನೆನಪಿನಲ್ಲಿರಲಿ. ಆದ್ದರಿಂದ ನಮ್ಮ ಶಿಸ್ತು, ವರ್ತನೆ ಸದಾ A-1ಆಗಿರಬೇಕು."

ಇದಕ್ಕೆ ಮೊದಲು ನಾನು ನಮ್ಮ ಬೆಟಾಲಿಯನ್ ಮುಖ್ಯಾಧಿಕಾರಿ ಮೇಜರ್ ನಾರಾಯಣ್ ಸಿಂಗ್ ಅವರಿಗೆ ಸ್ಥೂಲವಾಗಿ ಇದರ ವಿಚಾರ ತಿಳಿಸಿದ್ದೆ. "ಬಹಳ ಸಂತೋಷ. ನನ್ನ ಬೆಂಬಲ ಸದಾ ಇದೆ. ಆದರೆ ಸುವ್ಯವಸ್ಥಿತವಾಗಿ ಮುಂದುವರಿಯಬೇಕು. ವೈಮಾನಿಕ ತಿಳಿಯದ ಎತ್ತರದಲ್ಲಿ ಹಾರುವಾಗ ಹೇಗೆ ಹೋಗುತ್ತಾನೆ? ಪ್ರತಿ ಅಂಗುಲದಲ್ಲಿಯೂ ಹೊಸ ರೋಮಾಂಚಕ ಅನುಭವವಿರುವುದರ ಜೊತೆಗೆ ಅಪಾಯದ ತೀವ್ರತೆಯೂ ಏರಿರುವುದು ಎಂದು ತಿಳಿದು ಮುಂದೆ ನುಗ್ಗುತ್ತಾನೆ. ನಾವು ಹೊಸದಾರಿ ತುಳಿಯುವಾಗ, ಎನ್‌ಸಿಸಿಯಲ್ಲಿ ಹೊಸ ಸಂಪ್ರದಾಯ ಸ್ಥಾಪಿಸುವಾಗ ನಮ್ಮ ಒಂದು ಪುಟ್ಟ ತಪ್ಪು ಕೂಡ ಇಡೀ ಉದ್ದೇಶವನ್ನು ನಾಶಮಾಡಿಬಿಡಬಹುದು, ಮಾತ್ರವಲ್ಲ, ಭವಿಷ್ಯದಲ್ಲಿ ಬೇರೆ ಯಾರೂ ಇಂಥ ಸಾಹಸಕ್ಕೆ ಪುನಃ ತೊಡಗದಂತೆ ದೊಡ್ಡ ಆತಂಕವಾಗಿಯೂ ಪರಿಣಮಿಸಬಹುದು" ಎಂದು ಎಚ್ಚರಿಕೆಯ ಮಾತಾಡಿದ್ದರು.

ಸಾಹಸಗಳ ಮೊತ್ತವೇ ಅವರ ಜೀವನ. ಅರವತ್ತೈದು ಪ್ರಾಯ ಮೀರಿದ ಈ ದೀರ್ಘ ಆಜಾನುಬಾಹು ವ್ಯಕ್ತಿತ್ವದ ಕಣಕಣವೂ ಮಿಲಿಟರಿಯ ಶಿಕ್ಷಣ ರಂಗದಲ್ಲಿ, ಯುದ್ಧ ಕ್ಷೇತ್ರದಲ್ಲಿ, ಹಿಮಾಲಯದ ಎತ್ತರದಲ್ಲಿ, ಬರ್ಮಾ ಮಲಯಗಳ ದಟ್ಟ ಕಾಡುಗಳಲ್ಲಿ ಪ್ರದರ್ಶಿಸಿದ ದೈಹಿಕ ಮತ್ತು ಮಾನಸಿಕ ಸಾಹಸ ಕಾರ್ಯಗಳಿಗೆ ಸಾಕ್ಷಿಯಾಗಿತ್ತು. ಎರಡನೆಯ ಮಹಾಯುದ್ಧ, ಅನಂತರ ಹೈದರಾಬಾದ್ ಪೊಲಿಸ್ ಆಚರಣೆ ಇವುಗಳಲ್ಲಿ ಭಾಗವಹಿಸಿದ ವೀರರಿವರು. ಹೊಸಪೇಟೆಯಿಂದ ಮುಂದೆ ತುಂಗಭದ್ರೆಗೆ ಇರುವ ರೈಲ್ವೇ ಸೇತುವೆಯನ್ನು ಇವರು ಪೊಲಿಸ್ ಆಚರಣೆ ಸಂದರ್ಭದಲ್ಲಿ ರಕ್ಷಿಸಿದ ಸಾಹಸ ಕೇಳಿದವರಿಗೆ ಮರೆಯಲಾಗದ ವಿದ್ಯುದನುಭವ.

"ಸೈನಿಕರಾದರೆ ಅದೇ ಅವರ ವೃತ್ತಿ. ಆದ್ದರಿಂದ ಎಷ್ಟೋ ಸಂದರ್ಭಗಳಲ್ಲಿ ಜನ ನಷ್ಟವಾದರೂ ನಾವು ಗುರಿ ಸಾಧಿಸಲೇಬೇಕು ಎಂಬ ನಿರ್ಧಾರ ತೆಗೆದುಕೊಳ್ಳಬೇಕಾಗುವುದು. ಕ್ಯಾಡೆಟ್ಟುಗಳು ಸೈನಿಕರಲ್ಲ. ಇಲ್ಲಿ ಸಾಹಸಪ್ರದರ್ಶನವಾಗಬೇಕು. ಆದರೆ ಯಾವ ಅಪಾಯವನ್ನೂ ನಾವು ಎದುರಿಸಲು ತಯಾರಿಲ್ಲ." ಇದು ಅವರ ತರ್ಕಸರಣಿ.

# ಕಲ್ಲು ಕೊನರಿತು

## ಅಧ್ಯಾಯ ಎರಡು

ಮುಂದಿನ ಆದಿತ್ಯವಾರ. ಬೆಳಗ್ಗಿನ ೬.೪೫ ಗಂಟೆ. ನಾವೆಲ್ಲರೂ ಸುಮಾರು ಹದಿನೈದು ಮಂದಿ ಕಾಲೇಜಿನ ಹಿಂಬದಿಯಲ್ಲಿ ಸೇರಿದೆವು. ಮಳೆಗಾಳಿ ಬೀಸಿ ನಮಗೆ ನವಚೇತನ ಊಡುತ್ತಿತ್ತು. ಆದರೆ ೭ ಗಂಟೆಯಾದರೂ ನಾಯಕತ್ರಯರ ಸುಳಿವೇ ಇಲ್ಲ. ಕನ್ನಡಿಗರು ಆರಂಭಶೂರರೇ? ಆರಂಭವೇ ಆಗಲಿಲ್ಲವಲ್ಲ. ಕಾರಣವನ್ನು ಊಹಿಸಲು ನನಗೆ ಕಷ್ಟವಾಗಲಿಲ್ಲ. ನಮ್ಮ ಹಿಂದಿನ ಕಲ್ಲ ಮೇಲಿನ ಸಭೆಯಾದ ಮರುದಿವಸ ಹಿಮಾಲಯದ ಪರ್ವತಾರೋಹಣ ಶಿಬಿರ ಸೇರಲು ಒಬ್ಬ ಕ್ಯಾಡೆಟ್ಟನನ್ನು ಆಯ್ದು ಕಳಿಸಬೇಕೆಂದು ನನಗೆ ಆದೇಶ ಬಂದಿತು. ಶ್ರೀಧರನ್ ತನ್ನನ್ನು ಆಯಬೇಕೆಂದು ಕೋರಿಕೆ ಸಲ್ಲಿಸಿದ್ದ. ಆದರೆ ನಾನವನಿಗೆ ಸ್ಪಷ್ಟವಾಗಿ ನನ್ನ ನಿಲವನ್ನು ಹೇಳಿದ್ದೆ. "ನೀನು ಬಿಎಸ್ಸಿ ಕೊನೆಯ ವರ್ಷದಲ್ಲಿದ್ದೀಯೆ. ನನ್ನ ವಿದ್ಯಾರ್ಥಿ ಕೂಡ. ತಿಂಗಳು ನಾಲ್ಕು ದಿನ ಪಾಠ ಬಿಟ್ಟು ಬಲುದೂರ ಹೋಗುವುದು ಶ್ರೇಯಸ್ಕರ ಅಲ್ಲ. ಅದೂ ಅಲ್ಲದೆ ಮುಂದಿನ ವರ್ಷ ನೀನು ನಮ್ಮೊಡನೆ ಇಲ್ಲದಿರುವುದರಿಂದ ಇಂಥ ವಿಶೇಷ ಅಪೂರ್ವ ಶಿಕ್ಷಣ ಒಬ್ಬ ಜೂನಿಯರ್ ಹುಡುಗನಿಗೆ ಕೊಡಿಸುವುದು ಸರಿಯೆಂದು ತಿಳಿದಿದ್ದೇನೆ."

ಅವನಿಗೆ ಸ್ವಾಭಾವಿಕವಾಗಿಯೇ ಈ ವಾದ ಹಿತವಾಗಲಿಲ್ಲವೆಂದು ಅವನ ಮುಖಭಾವದಿಂದ ವ್ಯಕ್ತವಾಯಿತು. ಬಾಬಾ ಅವನ ಮಿತ್ರ. ಆದರೆ ಪಿಂಟೋನಿಗೇನಾಯಿತು? ಏನೇ ಇರಲಿ. ನಾವು ಹಿರಿಯರು ತೆಗೆದುಕೊಂಡ ನಿರ್ಧಾರ ಬೆಟಾಲಿಯನ್ನಿನ ಅಧಿಕೃತ ನಿರ್ಧಾರ. ಅದರ ಗೌರವ ಆ ನಿರ್ಧಾರವನ್ನು ಕಾರ್ಯಗತಗೊಳಿಸುವುದರಲ್ಲಿದೆ. ಎಡರು ತೊಡರುಗಳನ್ನು ನಾವು ಎದುರಿಸದಿದ್ದರೆ ಇನ್ನಾರು ಎದುರಿಸುವವರು? ಬಂದ ಹುಡುಗರನ್ನು ಕಟ್ಟಿಕೊಂಡು ನಾನೇ ಅಲೆದೆ. ಶಿಲಾರೋಹಣ ಅವರೋಹಣಗಳನ್ನು ಕುರಿತು ಒಂದು ಕಿರುಹೊತ್ತಗೆಯನ್ನು ಓದಿಕೊಂಡು ಹೋಗಿದ್ದುದು ಸ್ವಲ್ಪ ಪ್ರಯೋಜನ ನೀಡಿತು. ಲಾಲ್ ಬಾಗಿನ ಹೊರವಲಯದ ಕಡಿದಾದ ಬಂಡೆಗಳನ್ನು ಕ್ರಮಬದ್ಧವಾಗಿ ಏರಿ, ಇಳಿದು – ಅದಕ್ಕಿಂತ ಹೆಚ್ಚಾಗಿ ಕೈಕಾಲು ಮೈಗಳನ್ನು ಕಲ್ಲಿಗೆ ತರಿದುಕೊಂಡು – ಕಲ್ಲುಬಂಡೆ ಕಾಣುವಷ್ಟು ನುಣ್ಣಗಲ್ಲ, ಮೃದು ಖಂಡಿತ ಅಲ್ಲ ಎಂದು ಅರಿತುಕೊಂಡೆವು. ಗೆಲುವಿನ ಸೂಚನೆಯಿಂದ ಮರಳಿದೆವು.

ಸೋಮವಾರ ನಾನು ನಾಯಕತ್ರಯರನ್ನು ನೋಡಿದೆ. ಪಿಂಟೋನಿಗೆ ಬಹುಶಃ ಏಳಲು ತಡವಾಗಿರಬೇಕು. ಆದ್ದರಿಂದ ಬರದಿದ್ದುದಕ್ಕೆ ಸರಿಯಾದ ಕಾರಣ ಕೊಡದೇ "ಸಾರಿ ಸರ್. ಇನ್ನು ಮುಂದೆ ಹೀಗಾಗದು" ಎಂದ. ಅಂತೆಯೇ ನಡೆದುಕೊಂಡ. ಉಳಿದಿಬ್ಬರು, "ನಮಗೇನೋ ಮನಸ್ಸಿಗೆ ನೋವಾಯಿತು ಸರ್" ಎಂದು ಅರೆಹಲ್ಲು ಗಿರಿದರು. ನಾನು ಬಿರುಸಾಗಿಯೇ ಅಂದೆ "೧೨ನೇ ಮೈಸೂರು ನಮ್ಮೆಲ್ಲರಿಗಿಂತಲೂ ದೊಡ್ಡದು ಎಂದು ನಾವೆಲ್ಲರೂ ತಿಳಿದಿರತಕ್ಕದ್ದು. ಅದರ ನಿರ್ಧಾರ ಕಾರ್ಯಗತವಾಗಿಯೇ ಆಗುವುದು. ನಿಮ್ಮ ಕ್ರಮ ಸರಿಯಲ್ಲ."

ಮುಂದೆ ಎಂದೂ ಇಂಥ ಸನ್ನಿವೇಶ ಪುನರಾವರ್ತಿಸಲಿಲ್ಲ. ವಿದ್ಯಾರ್ಥಿಗಳೊಡನೆ ನಿಕಟ ಮತ್ತು ದೀರ್ಘಕಾಲದ ಸಂಬಂಧದಿಂದ ಒಂದು ವಿಚಾರ ಅರಿತಿದ್ದೇನೆ: ನಮ್ಮ ಧ್ಯೇಯ ಧೋರಣೆಗಳು ನ್ಯಾಯಸಮ್ಮತವಾಗಿ ಸ್ಪಷ್ಟವಾಗಿ ಇರಬೇಕು. ಅವುಗಳ ನಿರ್ವಹಣೆಯಲ್ಲಿ ಖಚಿತತೆ ದೃಢತೆ ಇರಬೇಕು. ಆಗ ಸಮಸ್ಯೆಗಳು ವೈಯಕ್ತಿಕ ಒಲವು ತಿರಸ್ಕಾರಗಳ ಸಮತಳದಿಂದ ಉನ್ನತ ಮಟ್ಟದಲ್ಲಿರುವ, ನಿಷ್ಪಕ್ಷಪಾತವಾಗಿ ಗುಣಾವಗುಣಗಳನ್ನು ನಿಷ್ಕರ್ಷೆ ಮಾಡುವ, ಉದಾತ್ತ ಸಮತಳಕ್ಕೆ ವರ್ಗಾಯಿಸಲ್ಪಡುವುವು. ಅಲ್ಲಿ ಪರಿಹಾರ ಸುಲಭ. ನಾವು ನಿರ್ಲಿಪ್ತರಾಗಿ ಉಳಿಯಬಹುದು.

ಮುಂದಿನ ಎರಡು ಮೂರು ಭಾನುವಾರ ಮುಗಿಯುವಾಗ ನಮ್ಮ ಹುಡುಗರ ಸಂಖ್ಯೆ ಮೂವತ್ತಕ್ಕೇರಿತು. ಇನ್ನೂ ಬರುವವರಿದ್ದರು. ಆದರೆ ಕೂಟದಲ್ಲಿ ಶಿಸ್ತು ಕಾಪಾಡಿಕೊಳ್ಳುವ ಉದ್ದೇಶದಿಂದ ಉಳಿದವರನ್ನು ಸೇರಿಸಿಕೊಳ್ಳಲಿಲ್ಲ. "೧೨ನೇ ಮೈಸೂರಿನ ಟೈಮ್ ಎಂದರೆ ರೇಡಿಯೋ ಟೈಮ್" ಎಂಬುದು ಹುಡುಗರಿಗೆ ಆ ಅಲ್ಪಾವಧಿಯಲ್ಲಿ ಚೆನ್ನಾಗಿ ಮನವರಿಕೆ ಆಯಿತು. ಪ್ರತಿ ಆದಿತ್ಯವಾರ ೭ ಗಂಟೆಗೆ ನಾವು ಹೊರಡಬೇಕು, ೧೫ ಮಿನಿಟು ಮೊದಲೇ ಕಾಲೇಜಿನ ಹಿಂದೆ ಸೇರಬೇಕು. ಈ ೧೫ ಮಿನಿಟಿನ ಅವಕಾಶ ಅನಿವಾರ್ಯ ಕಾರಣಗಳಿಂದ ತಡವಾಗಿ ಬರುವವರಿಗಾಗಿ ಮತ್ತು ನಮ್ಮ ಕಾರ್ಯಕ್ರಮವನ್ನು ಅಳವಡಿಸಿಕೊಳ್ಳಲಿಕ್ಕಾಗಿ. ಏಳು ಗಂಟೆಗೆ ಸರಿಯಾಗಿ ನಮ್ಮ ನಡಿಗೆ ತೊಡಗಿಯೇ ಬಿಡುತ್ತಿತ್ತು. ತಡವಾಗಿ ಬಂದವರಿಗೆ ಒಂದೇ ಉತ್ತರ, "ಸಾರಿ, ನೀವು ಮುಂದಿನವಾರ ಬನ್ನಿ."

"ಸೈಕಲ್ ಪಂಚರ್ ಆಯಿತು ಸರ್, ಬಸ್ ದೊರೆಯಲಿಲ್ಲ ಸರ್..."
"ನೀವು ಯಾಕೆ ತಡವಾಗಿ ಬಂದಿರಿ ಎಂಬುದನ್ನು ಸಮರ್ಥಿಸಲು ನೂರೆಂಟು ನಿಜ ಕಾರಣಗಳಿರಬಹುದು. ಇನ್ನೂ ಅಷ್ಟು ಕಾರಣಗಳನ್ನು ಸೃಷ್ಟಿಸಲು ನೀವು ಶಕ್ತರು ಎಂದು ನನಗೆ ತಿಳಿದಿದೆ. ಆದರೆ ಅವೆಲ್ಲವನ್ನೂ ನಿವಾರಿಸಿ ಕ್ಲುಪ್ತವೇಳೆಯಲ್ಲಿ ಬರುವುದರಲ್ಲಿಯೇ ನಿಮ್ಮ ಹಿರಿಮೆಯಿದೆ. ಮುಂದಿನ ವಾರ ಸರಿಯಾಗಿ ಬನ್ನಿ. ತಡವಾದರೆ ಬರಲೇಬೇಡಿ."

ಕಾಲನಿಷ್ಠೆಯ ಸಮಸ್ಯೆ ಮುಂದೆಂದೂ ನಮಗೆದುರಾಗಲಿಲ್ಲ. ಇಲ್ಲಿ ಎರಡು ವಿಚಾರ ಉಂಟು: ಒಂದು, ಅದರಿಂದ ಆತ್ಮಸಂಸ್ಕಾರವಾಗುವುದು; ಇನ್ನೊಂದು, ಅದು ನಾವು ಇತರರಿಗೆ, ಅವರ ಸಂವೇದನಾಶಕ್ತಿಗೆ ಪ್ರಕಟಿಸುವ ಗೌರವ, ನಮ್ಮ ಆಂತರಂಗಿಕ ಸಂಸ್ಕೃತಿಯ ಬಾಹಿರಂಗಿಕ ರೂಪ. ಜೀವನದ ಎಲ್ಲ ರಂಗಗಳಲ್ಲಿಯೂ ಇದು ಸ್ವಾಭಾವಿಕವಾಗಿಯೇ ಬರುವಂತಾಗಬೇಕು.

ನಮ್ಮ ಶಿಕ್ಷಣದ ಒಂದು ಉದ್ದೇಶ ಕಾಲನಿಷ್ಠೆಯ ಪ್ರಜ್ಞೆ ಹುಡುಗರಿಗೆ ಬರುವಂತೆ ಮಾಡುವುದು. ಪೆರೇಡ್ ಗ್ರೌಂಡಿನಲ್ಲಿ ಈ ಕುರಿತು ನಾವು ಕರುಣಾವಂತರಾಗುವುದು ಕರುಣೆಯ ದುರುಪಯೋಗ ಮಾಡಿದಂತೆ. ಅದರಿಂದ ಕ್ಯಾಡೆಟ್ಟುಗಳ ಭವಿಷ್ಯವನ್ನು ಅಷ್ಟು ಹಾಳು ಮಾಡಿದಂತೆ.

# ೧೨ನೇ ಮೈಸೂರಿನ ಶಿಲಾರೋಹಿಗಳು

### ಅಧ್ಯಾಯ ಮೂರು



ಲಕ್ಷ್ಮೀನಾರಾಯಣ (ಲಕ್ಷ್ಮಿ) ನಮ್ಮ ವಿದ್ಯಾರ್ಥಿ, ಕ್ಯಾಡೆಟ್. ಒರತೆ ಉಗಮಿಸುವ ಕಾಲದಲ್ಲಿ ಅವನು ಹಿಮಾಲಯದ ಮಂಜುಗಡ್ಡೆಗಳ ಮೇಲೆ ಏರಿ ಏರಿ ಹೋಗುತ್ತಿದ್ದ. ಅಲ್ಲಿ ಶಿಕ್ಷಣ ಪಡೆಯುತ್ತಿದ್ದ. ಸೆಪ್ಟೆಂಬರ್ ತರುಣದಲ್ಲಿ ಅವನು ಅಲ್ಲಿಂದ ಯಶಸ್ವಿಯಾಗಿ ಮರಳಿ ಬಂದ. ಅವನಿಗೆ ಅತ್ಯುಚ್ಚ ಪ್ರಶಸ್ತಿ ದರ್ಜೆ ಬಂದಿದ್ದುವು. ಹಿಂದೆ ಯಾವ ಕ್ಯಾಡೆಟ್ಟೂ ಸಾಧಿಸದ ವಿಕ್ರಮವನ್ನು ಅವನು ಅಲ್ಲಿ ಸಾಧಿಸಿ ತೇನ್ಸಿಂಗ್ ಮೊದಲಾದವರಿಂದ ಮೆಚ್ಚುಗೆ ಪತ್ರ ಪಡೆದು ಮರಳಿದ್ದ. ಅವನು ಬಂದಂದಿನಿಂದ ನಮ್ಮ ಶಿಲಾರೋಹಿಗಳ ಕೂಟಕ್ಕೆ ಒಂದು ಸ್ಪಷ್ಟ ಆಕಾರ ಮಾತು ಧೋರಣೆ ಒದಗಿದುವು.

ಲಕ್ಷ್ಮಿ ಮರಳಿದ ಪ್ರಥಮ ಆದಿತ್ಯವಾರ ನಾವು ಆರೇಳು ಮೈಲು ದೂರ ಕಲ್ಲು ಬಂಡೆಗಳನ್ನರಸಿ ನಡೆಯುತ್ತ ಹೋದೆವು. ಹೆಬ್ಬಾಳದ ಸಮೀಪದಲ್ಲಿ ಒಂದು ದೇವರ ಗುಡಿಯಿದೆ. ಅದರ ಆವರಣದಲ್ಲಿರುವ ಕಲ್ಲು ಬಂಡೆ ನಮ್ಮ ಶಿಕ್ಷಣಕ್ಕೆ ಸರಿಯಾಗಿ ಕಡೆದಂತಿತ್ತು. ಇದಕ್ಕೆ ವಿಶ್ವೇಶ್ವರಯ್ಯ ಬಂಡೆ ಎಂಬ ಹೆಸರಿತ್ತು. ದಿವಾನ್ ವಿಶ್ವೇಶ್ವರಯ್ಯ ಪ್ರತಿ ಸಂಜೆ ಇಲ್ಲಿವರೆಗೆ ನಡೆದು ಬಂದು ಇದರ ಮೇಲೆ ವಿರಮಿಸಿ ಹಿಂತಿರುಗುತ್ತಿದ್ದರಂತೆ. ಇದು ೨೦ ಅಡಿ ಎತ್ತರದ ಕಡಿದಾದ ಕಲ್ಲು. ಇದನ್ನು ನೆಟ್ಟಗೆ ಏರುವುದು ಸಾಧ್ಯವೇ ಇಲ್ಲ ಎಂದು ನಮಗೆ ತೋರಿತ್ತು. ಆದರೆ ಲಕ್ಷ್ಮಿ ಇದನ್ನು ಮಂಗ ಏರುವಷ್ಟು ಸುಲಭವಾಗಿ ಹಗುರವಾಗಿ ಏರಿದ. ಅಷ್ಟೇ ಸುಲಭವಾಗಿ ಅಲ್ಲಿಂದ ಇಳಿದೂ ಬಿಟ್ಟ! ಮುಂದೆ ಕಲ್ಲು ಹತ್ತುವ ಕಲೆಯನ್ನು ಹೆಜ್ಜೆ ಹೆಜ್ಜೆಯಾಗಿ ವಿವರಿಸತೊಡಗಿದ.

"ಕಲ್ಲುಗಳಲ್ಲಿ ಎರಡೇ ವಿಧ: ಹತ್ತಿರುವ ಕಲ್ಲು, ಹತ್ತದಿರುವ ಕಲ್ಲು. ಹತ್ತಲಾಗದ ಕಲ್ಲೆಂಬುದು ಇಲ್ಲ. ಕಲ್ಲುಗಳು ನಿಸರ್ಗದಲ್ಲಿ ಹಲವಾರು ಬಗೆಯಲ್ಲಿ ರೂಪುಗೊಂಡಿರುವುವು. ಅವು ನಮ್ಮ ಸೌಕರ್ಯಕ್ಕನುಗುಣವಾಗಿ ನಿರ್ಮಾಣವಾಗಿರುವುದಿಲ್ಲ. ಆದ್ದರಿಂದ ನಾವು ಹತ್ತಬೇಕಾದ ಕಲ್ಲಿನ ಸೂಕ್ಷ್ಮಾವಲೋಕನ ಬಲು ಅಗತ್ಯ. ಕಲ್ಲಿನ ಪ್ರತಿ ಗೀರು, ಬಿರುಕು, ಉಬ್ಬು, ತಗ್ಗು ನಮಗೆ ಒಂದೊಂದು ಅರ್ಥ ನೀಡುವುದು. ಅದನ್ನನುಸರಿಸಿ ನಮ್ಮ ಹತ್ತುವ ಮತ್ತು ಇಳಿಯುವ ಕ್ರಮಗಳನ್ನು ಅಳವಡಿಸಿಕೊಳ್ಳಬೇಕು." ಇದು ಅವನು ಕಲಿಸಿದ ಪ್ರಥಮ ಪಾಠ.

ಈ ಸಿದ್ಧಾಂತದ ಪ್ರಕಾರ ಆ ಕಲ್ಲನ್ನು ಅವನು ವಿವರಿಸಿ, ನಿಧಾನವಾಗಿ ಹತ್ತಿ ಮೇಲೆ ಹೋಗಿ, ಇತರರನ್ನೂ ಹತ್ತುವಂತೆ ಹುರಿದುಂಬಿಸಿ ಒಂದು ಹೊಸ ದೃಷ್ಟಿ ನಮಗಿತ್ತ. ಹಲವಾರು ಹುಡುಗರು ತುದಿಗೇರಿದರು. ಅವರ ಅಭಿಮಾನಕ್ಕೆ ಪಾರವೇ ಇಲ್ಲ. ಆಗದಿದ್ದವರು, ಸ್ಥೂಲಕಾಯರು ಪುನಃ ಪುನಃ ಮೇಲೇರಿ ಜಾರಿದವರು ಕಲ್ಲಿನಲ್ಲಿಯೇ ದೋಷ ಹುಡುಕತೊಡಗಿದರು. ಆ ದಿನ ನಮ್ಮ ಶಿಕ್ಷಣ ತುಂಬ ಯಶಸ್ವಿಯಾಯಿತು. ನಿಜವಾಗಿಯೂ ಶಿಲಾರೋಹಿಗಳ ಕೂಟವಾಯಿತು.

ಬಳಸುದಾರಿಗಾಗಿ ಅಥವಾ ಏಣಿಯಿಟ್ಟು ಬಂಡೆ ತುದಿಗೇರಿದವರಿಗೆ, ಅಥವಾ ನೆರಳಿನಲ್ಲಿ ಆರಾಮವಾಗಿ ಒರಗಿ, "ಕಲ್ಲೇರುವುದೇಕೆ? ಅದರಲ್ಲಿಯೂ ಒಂದು ಆಟವಿದೆಯೇ?" ಎನ್ನುವ ನಿರಾಶಾವಾದಿಗಳಿಗೆ, ನಿಷ್ಕ್ರಿಯಾವಂತರಿಗೆ, "ದೇವರೇ! ಅವರಿಗೆ ತಾವೇನೆನ್ನುತ್ತೇವೆ ಎಂಬುದರ ಪರಿವೆಯೇ ಇಲ್ಲ" ಎನ್ನಬೇಕಾಗುತ್ತದೆ. ನಮ್ಮ ಯಾವ ಆಟವಾದರೂ ಇಷ್ಟೇ ಅಲ್ಲವೇ? ಕ್ರಿಕೆಟ್ ಆಡದಿದ್ದರೆ, ನೋಡದಿದ್ದರೆ ಏನು? ಈಸದಿದ್ದರೆ ಏನು? ನಾವು ಸಾಯುತ್ತೇವೆಯೇ? ಸಾಹಸ ಭಾಗಿತ್ವದಿಂದ ಲಭಿಸುವ ಆತ್ಮತೃಪ್ತಿ, ಆತ್ಮವಿಶ್ವಾಸವೇ ಅದರ ಫಲ. ಪರೋಕ್ಷವಾಗಿ ಅದು ಜೀವನದ ಇತರ ರಂಗಗಳಲ್ಲಿಯೂ ಸಹಾಯಕವಾಗುವುದು.

ಮುಂದಿನವಾರ ಲಕ್ಷ್ಮಿ ಸೂಚಿಸಿದ, "ಕಡಿದಾದ ಆಳವಾದ ಬಂಡೆಯನ್ನು ಜಿಗಿಯಲು ಅಥವಾ rapple ಮಾಡಲು ನಮಗೆ ನೈಲಾನ್ ಹಗ್ಗ ಮತ್ತು ಇತರ ಹಲವಾರು ಸಾಧನಗಳು ಬೇಕು. ನೀವು ತರಿಸಿಕೊಡಬೇಕು ಸರ್." ಬೆಂಗಳೂರಿನಲ್ಲೆಲ್ಲಿಯೂ ಶಿಲಾರೋಹಣ, ಅವರೋಹಣಗಳಿಗಾಗಿಯೇ ತಯಾರಾದ ವಿಶೇಷ ತರದ ನೈಲಾನ್ ಹಗ್ಗ ದೊರೆಯಲಿಲ್ಲ. ತಾತ್ಕಾಲಿಕ ಉಪಯೋಗಕ್ಕೆಂದು ದಪ್ಪದ ಹತ್ತಿ ಹಗ್ಗಗಳನ್ನು ಖರೀದಿಸಿದೆವು. ವಿಶ್ವೇಶ್ವರಯ್ಯ ಬಂಡೆಯನ್ನೇ ಪ್ರಾರಂಭಿಕರಿಗೆ ಶಿಕ್ಷಣವೀಯಲು ಆಯ್ದುಕೊಂಡೆವು. ಇಲ್ಲಿ ಪ್ರತಿ ಆದಿತ್ಯವಾರವೂ ನಾನಾ ನಮೂನೆಯ ರ್‍ಯಾಪ್ಲಿಂಗ್ (ಹಗ್ಗಗಳ ಸಹಾಯದಿಂದ ಬಂಡೆ ಇಳಿಯುವುದು) ಕ್ರಮಗಳನ್ನು ಅಭ್ಯಸಿಸತೊಡಗಿದೆವು.

# ಬಂಡೆ ಜಿಗಿತ

### ಅಧ್ಯಾಯ ನಾಲ್ಕು



ಬಂಡೆಯ ಆಳ ಎಷ್ಟುಂಟೋ ಅದರ ಮೂರರಷ್ಟು ಉದ್ದದ ವಿಶಿಷ್ಟ ನೈಲಾನ್ ಹಗ್ಗವೂ (ರ್‍ಯಾಪ್ಲಿಂಗ್ ಹಗ್ಗ ಎಂದು ಇದರ ಹೆಸರು) ಸುಮಾರು ಒಂದೂವರೆಯಷ್ಟು ಉದ್ದದ ಇನ್ನೊಂದು ವಿಧದ ನೇಯ್ಗೆಯ ನೈಲಾನ್ ಹಗ್ಗವೂ (ಬಿಲೇ ಹಗ್ಗ) ಅತಿ ಮುಖ್ಯ ಆವಶ್ಯಕತೆಗಳು. ಉಳಿದವು ಲೋಹದ ಕೊಣಿಕೆಗಳು (ಕೆರಾಬಿನರ್ಸ್), ಹಗ್ಗದ ಕೊನೆಯಿಲ್ಲದ ಸಣ್ಣ ಸುರುಳಿಗಳು – ಸ್ಲಿಂಗ್ಸ್, ಕೈಗವಸುಗಳು, ಪಿಟನ್ಸ್ (ಒಂದು ಕೊನೆಯಲ್ಲಿ ಹಗ್ಗ ಸರಿಯಲು ತೂತಿರುವ ವಿವಿಧಾಕಾರದ ಲೋಹದ ಬಂಡೆಮೊಳೆಗಳು. ಇವನ್ನು ಬಂಡೆಯ ಬಿರುಕಿನೊಳಗೆ ಹೊಡೆದು ಭದ್ರವಾಗಿ ನೆಲೆಗೊಳಿಸಬಹುದು; ಹಲವಾರು ಪಿಟನ್ನುಗಳ ತೂತಗಳಿಗಾಗಿ ಹಾಯಿಸಿ ಕಟ್ಟಿದ ನೈಲಾನ್ ಹಗ್ಗ ಶಿಲಾರೋಹಿಯ ಯಾವುದೇ ಚಟುವಟಿಕೆಗೆ ಭದ್ರ ಆಧಾರವಾಗುವುದು) ಮತ್ತು ಸುತ್ತಿಗೆಗಳು. ನೈಲಾನ್ ಹಗ್ಗ ದೊರೆಯದಿದ್ದರೆ ಹತ್ತಿ ಹಗ್ಗವನ್ನು ಉಪಯೋಗಿಸಬಹುದು. ಆದರೆ ಇಲ್ಲಿ ಹಗ್ಗ ಕಡಿದುಹೋಗಿ ಜಿಗಿಯುವಾತ ಗಾಸಿಗೊಳ್ಳುವ ಅಪಾಯ ಬಲು ಹೆಚ್ಚು. ರ್‍ಯಾಪ್ಲಿಂಗ್ ಹಗ್ಗದ ಎರಡು ಕೊನೆಗಳನ್ನೂ ಸೇರಿಸಿ ಹಿಡಿದು ಅದನ್ನು ಸಮಭಾಗ ಮಾಡಬೇಕು. ಎರಡು ಕೊನೆಗಳನ್ನು ಬಂಡೆಯ ಮೇಲಿನಿಂದ ಕೆಳಕ್ಕೆ ಇಳಿಬಿಡಬೇಕು. ಹಗ್ಗದ **U** ಆಕಾರದ ಕೇಂದ್ರವನ್ನು ಬಂಡೆಯ ಅಂಚಿನಿಂದ ಮೇಲಕ್ಕಿರುವ ಭದ್ರ ಆಧಾರಕ್ಕೆ ಕಟ್ಟಬೇಕು. ಇದು ಅಲ್ಲಿರುವ ಭಾರೀ ತುಂಡು ಬಂಡೆಯೋ ಮರದ ಕಾಂಡವೋ ಪಿಟನ್ನುಗಳ ಸರಣಿಯೋ ಇರಬಹುದು, ಅಂತೂ ಮೇಲಿನ ಹಿಡಿತ ಅತಿ ಭದ್ರವಾಗಿರತಕ್ಕದ್ದು. ಕೆಳಕ್ಕೆ ಚಾಚಿದ ಖಾಲಿ ಕೊನೆಗಳು ಬಂಡೆಯ ಬುಡದಿಂದ ಹತ್ತಡಿಯಾದರೂ ಮುಂದೆ ಹೋಗುವಷ್ಟು ಉದ್ದವಿರಬೇಕು. ರ್‍ಯಾಪ್ಲಿಂಗ್ ಹಗ್ಗ ಗಟ್ಟಿಯಾಗಿ ಕಟ್ಟಲ್ಪಟ್ಟಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಅದರ ಒಂದೊಂದು ಕೊನೆಯನ್ನೂ ನಾಲ್ಕೈದು ಮಂದಿ ಗಟ್ಟಿಯಾಗಿ ಹಿಡಿದು ಒಟ್ಟಿಗೆ ಹಲವಾರು ಸಲ ಜಗ್ಗಬೇಕು. ಹಗ್ಗದ ಭದ್ರತೆಯೂ ಇದರಿಂದ ಪರೀಕ್ಷೆಗೊಳಪಡುವುದು. ಇಷ್ಟಾದ ಮೆಲೆ ರ್‍ಯಾಪಲ್ ಮಾಡುವಾತ (ಅಂದರೆ ಜಿಗಿವಾತ) ಬಂಡೆಯ ಮೇಲೆ ಮುಂದಿನ ಹೆಜ್ಜೆ ಇಡುತ್ತಾನೆ. ಅವನು ಷರಾಯಿ ಧರಿಸಿರುವುದು ಉತ್ತಮ. ಮೈಮೇಲೆ ಜೆರ್ಸಿ ಪುಲ್ಲೋವರ್ ಅಥವಾ ಪೂರ್ಣ ತೋಳಿನ ಷರಟನ್ನು ತೊಟ್ಟುಕೊಂಡಿರಬೇಕು. ಕೈಗಳಿಗೆ ಗವಸು, ಸ್ಲಿಂಗನ್ನು ಕಾಲುಗಳ ಹೊರಗಾಗಿ ಸರಿಸಿ ಸೊಂಟದೆಡೆಗೆ ತರುವನು, ಹಿಂದಿನ ಭಾಗವನ್ನು ಕೆಳಗಿನಿಂದ ಮುಂದಕ್ಕೆ ತಂದು, ಮುಂದಿನ ಭಾಗಕ್ಕೆ ಜೋಡಿಸಿ ಹಿಡಿದು ಕೆರಾಬಿನಾರಿನಿಂದ ಅವನ್ನು ಪೋಣಿಸುವನು. ರ್‍ಯಾಪ್ಲಿಂಗ್ ಹಗ್ಗವನ್ನೂ ಇದೇ ಕೆರಾಬಿನಾರಿಗೆ ಪೋಣಿಸಿ, ಇಳಿವಾತನ ಎಡಮಗ್ಗುಲಿಗಾಗಿ ಕೆಳಗೆ ಬಿಡಲಾಗುವುದು. ಅವನ ಸೊಂಟಕ್ಕೆ ಪ್ರತ್ಯೇಕ ಇನ್ನೊಂದು ಹಗ್ಗವನ್ನು (ಬಿಲೇ ಹಗ್ಗ) ಸುತ್ತಿ ಕಟ್ಟಿ ಅದನ್ನು ಬಂಡೆಯ ಮೇಲೆ ಭದ್ರವಾಗಿ ಕುಳಿತುಕೊಂಡ 'ರಕ್ಷಕ' (ಬಿಲೇ ಮ್ಯಾನ್) ಹಿಡಿದುಕೊಳ್ಳುತ್ತಾನೆ. ಇಳಿವಾತ ರ್‍ಯಾಪ್ಲಿಂಗ್ ಹಗ್ಗವನ್ನು ಕೆರಾಬಿನಾರಿನ ಮುಂದೆ ಬಲಗೈಯಲ್ಲೂ ಹಿಂದೆ ಎಡಗೈಯಲ್ಲೂ ಹಿಡಿದುಕೊಂಡು, ತನ್ನ ಕೊಳ್ಳ ಜಿಗಿತವನ್ನು

ನಿಯಂತ್ರಿಸಿಕೊಳ್ಳುತ್ತಾನೆ. ಆತ ಇಳಿಯುತ್ತ ಹೋದಂತೆ ಬಿಲೇಕಾರನು ಆ ಹಗ್ಗವನ್ನು ಕ್ರಮೇಣ ಸಡಿಲವಾಗಿ ಬಿಡುತ್ತ ಹೋಗುತ್ತಾನೆ. ಇಳಿವಾತ ಹತೋಟಿ ತಪ್ಪಿ ಕಂಗಾಲಾದರೆ ಮಾತ್ರ ಬಿಲೇಕಾರ ಹಗ್ಗ ಬಿಗಿಹಿಡಿದು ಸಮತೋಲನ ಕಾಯ್ದಿಟ್ಟುಕೊಳ್ಳಲು ಸಹಾಯ ಮಾಡುತ್ತಾನೆ. ಇಳಿವಾತ ಗಾಬರಿಯಿಂದ ಏನೂ ಮಾಡಲಾರದವನಾಗಿ ಪ್ರಪಾತದ ಮಧ್ಯೆ ನೇಲುತ್ತಿದ್ದರೆ ಬಿಲೇಕಾರ ಹಗ್ಗವನ್ನು ಬಲು ಜಾಗರೂಕತೆಯಿಂದ ಸಡಿಲಗೊಳಿಸುತ್ತ ಗುಂಡುಕಲ್ಲನ್ನು ಬಾವಿಗಿಳಿಸಿದಂತೆ ಅವನನ್ನು ಬಂಡೆಯ ತಳಕ್ಕೆ ಇಳಿಸುತ್ತಾನೆ. ಜಿಗಿವಾತನ ಪ್ರಾಣ ರಕ್ಷಿಸಲು ಮತ್ತು ಅವನಿಗೆ ಧೈರ್ಯ ನೀಡಲು ಬಿಲೇ ಹಗ್ಗ ಅವಶ್ಯ. ಇದನ್ನು ನಿಯಂತ್ರಿಸುವವರ ಪಾತ್ರ ಬಲು ಮುಖ್ಯ. ಅವಗಣನೆಯಲ್ಲಿ, ಜಿಗಿವಾತ ಪ್ರಪಾತದ ತಳಕ್ಕೆ ಧೊಪ್ಪನೆ ಬಿದ್ದು ಪ್ರಾಣಾಪಾಯವೂ ಸಂಭವಿಸಬಹುದು. ಜೊತೆಯಲ್ಲಿಯೇ ಬಿಲೇಕಾರನನ್ನು ಹಗ್ಗ ಜಗ್ಗಿ ಬಂಡೆಯ ತಳಕ್ಕೆ ಕೆಡೆದೂ ಪ್ರಾಣಾಪಾಯ ಸಂಭವಿಸಬಹುದು.



ಹೀಗೆ ಸಕಲ ರಕ್ಷಣೆಗಳಿಂದ ಕೂಡಿ ಜಿಗಿವಾತ ಪ್ರಪಾತದ ಅಂಚಿಗೆ ಹಿಂದೆ ಹಿಂದೆ ನಡೆದು ಬರುವನು – ದುರ್ಯೋಧನ ವೈಶಂಪಾಯನ ಸರೋವರ ಹೊಕ್ಕಂತೆ, ಅಂದರೆ ಅವನ ಬೆನ್ನು ಪ್ರಪಾತದೆಡೆಗೆ ತಿರುಗಿರುವುದು. ಮೊದಲೇ ಹೇಳಿದಂತೆ ಹಗ್ಗ ಹಿಡಿದ ಆತನ ಎಡಗೈ ಹಿಂದಕ್ಕೂ ಬಲಗೈ ಮುಂದಕ್ಕೂ ಚಾಚಿರುವುವು. ಆತ ಹಿಂದೆ ಹಿಂದೆ ನಡೆದಂತೆ ಹಗ್ಗ ಕೆರಾಬಿನರ್ ಒಳಗೂ ಎರಡು ಕೈಗವುಸುಗಳ ನಡುವೆ ನಿಯಂತ್ರಿತವಾಗಿ ಜಾರುತ್ತದೆ. ನೈಲಾನ್ ಹಗ್ಗ ಹಗುರ, ಬಲು ಗಟ್ಟಿ ಮತ್ತು ನುಣುಪಾಗಿ ಜಾರುವುದು. ಆದ್ದರಿಂದ ರ್‍ಯಾಪ್ಲಿಂಗಿಗೆ ಅದೇ ಸರ್ವಶ್ರೇಷ್ಠ. ಜಿಗಿವಾತ ಬಂಡೆಯ ಅಂಚಿಗೆ ಬಂದು ಹಿಂದೆ ಹಿಂದೆ ಬಗ್ಗುತ್ತಾನೆ. ಈಗ ಅವನ ದೇಹವಿಡೀ ನೆಟ್ಟಗಿದ್ದು, ಬಂಡೆಯ ಮೇಲ್ಭಾಗದಲ್ಲಿ ಕುಳಿತು ನೋಡುವವರಿಗೆ ಕೆಳಗಿನ ನೆಲಕ್ಕೆ ಸಮಾಂತರವಾಗಿರುವಂತೆ ಕಾಣುವುದು. ತನ್ನ ಭಾರದಿಂದ ಅವನು ಇನ್ನೂ ಮಾಲುವ ಮೊದಲೇ ಬಂಡೆಗೊಂದು ಬಲವಾದ ಒತ್ತವಿತ್ತು ದೂರಕ್ಕೆ ಚಿಮ್ಮುತ್ತಾನೆ. ಅಷ್ಟರಲ್ಲಿಯೇ ಹಗ್ಗವನ್ನು ತುಸು ಸಡಿಲಬಿಟ್ಟು ಎಂಟು ಹತ್ತಡಿ ಕೆಳಕ್ಕೆ ಸರ್ರನೆ ಜಾರಿರುತ್ತಾನೆ. ದೇಹ ಆಂದೋಲಿಸಿ ಕಾಲುಗಳು ಪುನಃ ಪ್ರಪಾತದ ಮೈಗೆ ಬಂದು ಬಡಿವಾಗ, ಹಗ್ಗ ತುಸು ಬಿಗಿಹಿಡಿದು ಇನ್ನೊಂದು ಒದೆತ. ಪುನಃ ಎಂಟು ಹತ್ತಡಿ ಜಾರಿಕೆ – ಈ ಕ್ರಮದಲ್ಲಿ ಅವನು ಎಷ್ಟು ಆಳವನ್ನು ಬೇಕಾದರೂ (ರ್‍ಯಾಪ್ಲಿಂಗ್ ಹಗ್ಗದ ಉದ್ದದ ಮಿತಿ ಅವಲಂಬಿಸಿ) ಜಿಗಿದಿಳಿಯಬಹುದು. ಎಡಗೈ ಹಿಡಿತ ಅವನಿಗೆ ಭದ್ರತೆಯ ಪ್ರಜ್ಞೆ ನೀಡುವುದು. ಬಲಗೈ ಹಿಡಿತ ದಿಕ್ಕು ನಿರ್ದೇಶನ ಮಾಡುವುದು. ಅವನು ಹೀಗೆ ಮಿತಿಯಲ್ಲಿ ಜಿಗಿವಾಗ ಬಿಲೇಕಾರರು ಆ ಹಗ್ಗವನ್ನು ಸುಲಭವಾಗಿ ಜಾರಗೊಡುವರು. ಇಳಿವಾತನ ಹದ ತಪ್ಪಿದ ಅರಿವಾದರೆ ಮಾತ್ರ ಅದನ್ನು ಜಗ್ಗಿ ಹಿಡಿಯುತ್ತಾರೆ.


ಬಂಡೆ ಜಿಗಿತ

ಅದು ಒಂದು ನಮೂನೆ. ಇಳಿಯುವ ಕ್ರಮಗಳಲ್ಲಿ ಹಲವಾರು ವಿಧಗಳಿವೆ. ತತ್ತ್ವ ಒಂದೇ. Stomach rapelling ಮತ್ತು ಗಾಯಗೊಂಡವನ ರಕ್ಷಣೆ ಇವುಗಳ ಪೈಕಿ ಅತಿಕಠಿಣ. ಹೊಟ್ಟೆ ರ್‍ಯಾಪ್ಲಿಂಗಿನಲ್ಲಿ ಇಳಿವಾತ (ಇದರಲ್ಲಿ ಜಿಗಿತವಿಲ್ಲ, ನಡಿಗೆ ಮಾತ್ರ) ಬಂಡೆಯ ನೆತ್ತಿಯಿಂದ ಪ್ರಪಾತದ ತಳದೆಡೆಗೆ ಮುಖ ಮಾಡಿ ನಡೆಯುತ್ತಾನೆ. ಮುಂದೆ ಅದರ ಅಂಚಿನಿಂದ ಕೆಳಗೆ ಸರಿಯುತ್ತಿದ್ದಂತೆ ದೇಹವನ್ನು ಬಂಡೆಗೆ ಲಂಬವಾಗಿಯೂ ನೆಲಕ್ಕೆ ಸಮಾಂತರವಾಗಿಯೂ ಇಟ್ಟುಕೊಳ್ಳುತ್ತಾನೆ. ಇಲ್ಲಿ ಇಳಿ ಹಗ್ಗದ ಎರಡೆಳೆಗಳನ್ನು ಪ್ರತ್ಯೇಕಿಸಿ ಇಳಿವಾತ ನಡುವೆ ಇರುತ್ತಾನೆ. ಹಗ್ಗಗಳನ್ನು ತನ್ನ ಹೊಟ್ಟೆಯ ಮೇಲೆ ಎದುರುಬದಿರು ಹಾಯಿಸಿ, ಉಜ್ಜಿ ಸರಿಯುವಂತೆ ಮಾಡಿ, ಕೇವಲ ಹಸ್ತದಲ್ಲಿ ನಿಯಂತ್ರಿಸುತ್ತಾನೆ. ಈ ಕ್ರಮದಲ್ಲಿ ನೆಲದ ಪ್ರತಿಯೊಂದು ಪುಟ್ಟ ಕಲ್ಲೂ ಗಿಡವೂ ಭಯಂಕರವಾಗಿ ಆತನನ್ನು ತಿವಿಯಲು, ನುಂಗಲು ಬಂದಂತೆ ಭಾಸವಾಗುವುದು. ಗಾಯಗೊಂಡವನನ್ನು ಬೆನ್ನ ಮೇಲೆ ಉಪ್ಪು ಮೂಟೆಯಂತೆ ಹೊತ್ತು ಹೊಟ್ಟೆ ರ್‍ಯಾಪ್ಲಿಂಗ್ ಕ್ರಮದಿಂದ ಇಳಿಯುವುದು ಇನ್ನೂ ಕಠಿಣ ಸಾಹಸ. ಹೀಗೆ ರ್‍ಯಾಪ್ಲಿಂಗ್ ಅತಿ ಅಪಾಯಕರವಾದ, ಆದ್ದರಿಂದ ಅಷ್ಟೇ ರೋಮಾಂಚಕವಾದ ಆಟ ಕೂಡ. ಇದರಲ್ಲಿ ಭಾಗವಹಿಸುವವರಿಗೆ ಭಾರೀ ದೇಹ ದಾರ್ಢ್ಯವೇನೂ ಬೇಕಾಗಿಲ್ಲ. ಹತ್ತು ಹದಿನೈದು ಅಡಿ ಆಳದ ಬಂಡೆಗಳಲ್ಲಿ ಜಿಗಿವ ಕ್ರಮಗಳನ್ನು ಅಭ್ಯಾಸ ಮಾಡಿ ಧೈರ್ಯ ಸಂಪಾದಿಸಿಕೊಂಡರೆ ಮುಂದೆ ಆಳ ಹೆಚ್ಚಿದಂತೆ ಅಧಿಕಾಧಿಕ ಉಲ್ಲಾಸ ಪಡೆಯಬಹುದು. ಧೈರ್ಯವಾಗಿ ದುಮುಕದವನಿಗೆ, ಸ್ವಲ್ಪವಾದರೂ ಬಂಡೆಯ ಪ್ರೇಮಮಯ ಮೃದು ಸ್ಪರ್ಶದ ಅನುಭವ ಪಡೆಯದವನಿಗೆ ಈ ವಿದ್ಯೆ ಕರಗತವಾಗದು. ಮೈ ನೆನೆಸಿಕೊಳ್ಳದೇ ಗುಟುಕು ನೀರು ಕುಡಿಯದೇ ಈಸು ಕಲಿಯುವುದು ಸಾಧ್ಯವೇ?

ಇಲ್ಲಿ ನಾವು ಕಲಿಯುವ ಪಾಠ ಎರಡು. ಬಂಡೆಯೊಡನೆ ಸೆಣಸಾಟ ಸಲ್ಲದು. ವಿನಯಶೀಲರಾಗಿ ಅದರ ಮೈಗನುಗುಣವಾಗಿ ವರ್ತಿಸಿದರೆ ಬಂಡೆ ನಮ್ಮನ್ನು ಅದರ ಮಂಡೆಯ ಮೇಲೆ ಹೊತ್ತು ಕುಣಿಯಬಿಡುವುದು. ಇನ್ನೊಂದು ಪಾಠ. ಬಂಡೆ ಜಿಗಿವಾಗ ಮನಃಸ್ಥೈರ್ಯವೇ ನಿಜವಾದ ಪ್ರೇರಕಶಕ್ತಿ. ಅಪಾಯಕ್ಕೂ ಸುರಕ್ಷಿತತೆಗೂ ನಡುವೆ ಪ್ರತಿಯೊಬ್ಬನ ಮನಸ್ಸು ಒಂದು ದುರ್ಗಮಾಭೇದ್ಯ ಕೋಟೆಯನ್ನು ಸೃಜಿಸಿರುವುದು. ಬಂಡೆಯ ಅಂಚನ್ನು ತಲಪುವಷ್ಟು ಹೊತ್ತು ನಮಗೆ ಈ ಕೋಟೆ ಎಷ್ಟು ದಪ್ಪವಾದದ್ದು, ಉಕ್ಕಿನಂತಹದು ಎಂಬುದರ ಅರಿವೇ ಇರುವುದಿಲ್ಲ. ಅಲ್ಲಿ ತಲಪುತ್ತಿದ್ದಂತೆಯೇ ಇದು ಸ್ಪಷ್ಟವಾಗಿ ಹೇಳುತದೆ, "ನಾನಿಲ್ಲಿ ಅಡ್ಡ ನಿಂತಿದ್ದೇನೆ. ನಿನ್ನನ್ನು ಮುಂದೆ ಹೋಗಲು ಬಿಡುವುದಿಲ್ಲ. ಹೋಗಲೇ ಬೇಕಾದರೆ ನನ್ನನ್ನು ಭೇದಿಸಿ ಹೋಗು, ನೋಡೋಣ, ನಿನ್ನ ಸಾಮರ್ಥ್ಯ." ಲಂಕಾ ಪ್ರವೇಶಕ್ಕೆ ಮೊದಲು ವೀರ ಹನುಮಂತ ಸಿಂಹಿಕೆಯನ್ನು ಎದುರಿಸಿ ಸಂಹರಿಸಿ ಮುಂದುವರಿಯಬೇಕಾಯಿತಲ್ಲವೇ? ಬಹಳ ಮಂದಿ ಈ ಭಿತ್ತಿಯನ್ನು ಒಡೆಯಲಾಗದೇ ಹೆದರಿ, ಥರಥರನೆ ನಡುಗಿ ಕುಸಿದು, ಅಂಚಿನಿಂದ ಮೇಲಕ್ಕೆ ತೆವಳಿಯಾದರೂ ಬಂದುಬಿಡುತ್ತಾರೆ. ಅದನ್ನು ಒಡೆದವನಿಗೆ ಮಾತ್ರ ಮುಂದಿನ ಸಾಹಸದ ಸಂತೋಷಾನುಭವ. ಈ ನಡುಬಾನಿನಲ್ಲಿ ಸರ್‍ರನೆ ಜಾರಿ, ಕುಪ್ಪಳಿಸಿ, ಜಾರಿ ಇಳಿಯುವ ಅನುಭವಕ್ಕೆ ಸಮಾನವಾದದ್ದು, ನಾನು ಸ್ವಾನುಭವದಿಂದ ತಿಳಿದಂತೆ, ಕಾರ್ ಚಾಲನೆಯಲ್ಲಿದೆ. ಗಂಟೆಗೆ ಸುಮಾರು ೫೦ ಮೈಲಿನ ಮಿತಿವರೆಗೆ ಕಾರನ್ನು ನಾವೇ ಪ್ರಯತ್ನಪೂರ್ವಕವಾಗಿ ಚಾಲನೆ ಮಾಡುತ್ತಿದ್ದೇವೆ ಎಂಬ ಭಾವನೆ ಬರುವುದು. ಈ ಮಿತಿ ದಾಟಿದ ಮೇಲೆ ಬೇರೊಂದು ಅನುಭವವಾಗುವುದು: ನೆಲ, ಗಿಡ, ಮರ, ಆವರಣ, ದಾರಿ ಎಲ್ಲ ಅತಿ ವೇಗದಿಂದ ನಮ್ಮ ಸುತ್ತಲೂ ಹಿಂದಕ್ಕೆ ಜಾರುತ್ತಿವೆ. ನಾವು ಇವುಗಳ ಮಧ್ಯೆ ತೇಲುತ್ತ ಸ್ವಚ್ಛಂದವಾಗಿ ವಿಹರಿಸುತ್ತಿದ್ದೇವೆ. ಇದು ವಾಯುಲಘಿಮಾನುಭವ (levitation). ಇಂಥ ಅನುಭವ ಬಂಡೆ ಜಿಗಿವಾಗ ನಮಗಾಗುವುದು. ನಿಸರ್ಗವನ್ನು ಔನ್ನತ್ಯದಿಂದ ವೀಕ್ಷಿಸುವ ಕ್ರಮವಿದು. ಶ್ರೇಷ್ಠನಟ ಪಾತ್ರ ತಾದಾತ್ಮ್ಯಹೊಂದಿದಾಗ ಇಂಥದೇ ಭಾವದೀಪ್ತನಾಗಿರುವನೆಂದು ಕೇಳಿದ್ದೇನೆ.

ವಾರವಾರ ನಮ್ಮ ಹುಡುಗರು ಮೈಲುಗಟ್ಟಲೆ ನಡೆದು ಬಂಡೆ ಏರಿ ಜಿಗಿದು ಈ ಆಟಗಳಲ್ಲಿ ಬಲು ನಿಷ್ಣಾತರಾದರು. ಇಂಥ ಒಂದು ರವಿವಾರ ಅವರಿಂದಲೇ ಸೂಚನೆ ಬಂದಿತು, "ನಾವಿಷ್ಟೆಲ್ಲ ಹಾರಾಡುತ್ತಿದ್ದೇವಲ್ಲ. ಈ ವರ್ಷ ಮುಗಿಯುವ ಮೊದಲು ಏನಾದರೊಂದು ಸಾಹಸ ಪ್ರದರ್ಶನ ನಡೆಸಬೇಕು."

ನಮ್ಮ ದೊರೆಗಳು (ಮೇಜರ್ ನಾರಾಯಣ ಸಿಂಗ್) ರಾಮನಗರ, ಸಾವನದುರ್ಗ, ಶಿವಗಂಗೆ, ನಂದಿಬೆಟ್ಟ ಎಲ್ಲಿಯಾದರೊಂದೆಡೆ ಒಂದೆರಡು ದಿವಸ ಶಿಬಿರ ನಡೆಸಿ ಕಲಿತ ವಿದ್ಯೆಯೆಲ್ಲವನ್ನೂ ಚೆನ್ನಾಗಿ ಅಭ್ಯಸಿಸಿ ಮರಳಬಹುದೆಂದು ಸಲಹೆಯಿತ್ತರು. ಆದರೆ ನನಗೆ ತಿಳಿದಿದ್ದಂತೆ ಕುದುರೆಮುಖವೇ ಗಂಡುಗಲಿಗಳಿಗೆ ಸರಿಯಾದ ಸ್ಥಳ. ಅಲ್ಲಿ ಸಾಹಸಪ್ರಿಯರಿಗೆ, ನಿಸರ್ಗ ಪ್ರೇಮಿಗಳಿಗೆ, ಇತಿಹಾಸ ಪ್ರಸಿದ್ಧ ಸ್ಥಳ ವೀಕ್ಷಕರಿಗೆ ರಸದೂಟವಿದೆ. ಹತ್ತು ವರ್ಷಗಳ ಹಿಂದೊಮ್ಮೆ ಅಲ್ಲಿ ನಾನು ಹತ್ತಿಪ್ಪತ್ತು ಹುಡುಗರನ್ನು ಕಟ್ಟಿಕೊಂಡು (ಆಗ ನಾನು ಮಡಿಕೇರಿಯಲ್ಲಿದ್ದೆ) ಅಲೆದಿದ್ದೆ. ಅಂದು ಇದ್ದದ್ದು ಉತ್ಸಾಹ ಒಂದೇ. ಅದರ ಜೊತೆಗೆ ಕ್ರಮಬದ್ಧ ಯೋಜನೆಯನ್ನು ಹೊಂದಿಸಿಕೊಂಡು ಹೆಚ್ಚಿನ ಆನಂದ, ಜ್ಞಾನ ಪಡೆಯಲು ತಿಳಿವಳಿಕೆ ಸಾಕಾಗಿರಲಿಲ್ಲ. ಹೀಗಾಗಿ 'ಎಂಕು ಪಣಂಬೂರಿಗೆ ಹೋಗಿ ಬಂದಂತೆ' ನಾವೂ ಕುದುರೆಮುಖಕ್ಕೆ ಹೋಗಿಬಂದಿದ್ದೆವು. ಆ ಶಿಖರ ನನ್ನ ಮನಸ್ಸಿನ ಮೇಲೆ ಎಂದೂ ಮಾಸದ ಮುದ್ರೆಯೊತ್ತಿತ್ತು. ಇನ್ನೊಮ್ಮೆ ಸರಿಯಾಗಿಯೇ ಬರುತ್ತೇನೆ ಎಂದುಕೊಂಡಿದ್ದೆ.

# ಕುದುರೆಮುಖದ ಕರೆ

### ಅಧ್ಯಾಯ ಐದು

ಈಗ ಕಾಲ ಸನ್ನಿಹಿತವಾಗಿತ್ತೋ ಏನೋ. ಕುದುರೆಮುಖ ಕೆನೆಯಿತು. ನಾನು ಹುಡುಗರಿಗೆ ಅದರ ಸಾಹಸವನ್ನು ವಿವರಿಸಿದೆ. ಅದು ಎಲ್ಲಿ ಉಂಟು, ಏನು ಎಂದು ಇವರು ಯಾರಿಗೂ ತಿಳಿಯದು. ಆದರೂ ಹುಡುಗಾಟಿಕೆಯ ಉತ್ಸಾಹದಿಂದ ಹಾರಾಡಿದರು. ಅಂದಿನಿಂದಲೇ ಕುದುರೆಮುಖದ ಕನಸನ್ನು ಕಾಣತೊಡಗಿದರು. ಇದು ಅಕ್ಟೋಬರ್ (೧೯೬೬) ಸುಮಾರಿಗೆ.

ದೊರೆಗಳು ಈ ಯೋಜನೆಯನ್ನು ಸ್ವಾಗತಿಸಿದರು. ಸುಮಾರು ೩೦ ಕ್ಯಾಡೆಟ್ಟುಗಳು, ೧೦ ದಿವಸಗಳ ಶಿಬಿರ. ವೆಚ್ಚವೆಷ್ಟಾದೀತೆಂದು ಅಂದಾಜು ಮಾಡಲು ನನಗೆ ಹೇಳಿದರು. ಅದೇ ವೇಳೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಟಿ. ಆರ್. ಜಯರಾಮನ್ ನಮ್ಮ ಕಾಲೇಜಿನ ವಿದ್ಯಾರ್ಥಿ ಸಂಘದ ಉದ್ಘಾಟನಾ ಭಾಷಣ ಮಾಡುತ್ತ ಹೀಗೆಂದರು: "ವಿದ್ಯಾರ್ಥಿಗಳು ಇಂದು ಪೂರ್ಣ ವ್ಯಕ್ತಿತ್ವ ಪಡೆದು ವಿಕಸಿಸಬೇಕು. ಪಾಠ ಪ್ರವಚನದ ಜತೆಗೆ ಸಾಹಸಪ್ರಿಯತೆ, ಆಟ ಓಟಗಳು ಬೆಳೆಯಬೇಕು. ಅವರ ಯಾವುದೇ ವಿಧದ ರಚನಾತ್ಮಕ ಸಾಹಸಕ್ರಿಯೆಯನ್ನೂ ಬೆಂಗಳೂರು ವಿಶ್ವವಿದ್ಯಾಲಯ ಸಹಾನುಭೂತಿಯಿಂದ ಪರಿಶೀಲಿಸುವುದು."

ನಾನು ಈ ಒಂದು ಆಶ್ವಾಸನೆಯ ಎಳೆ ಹಿಡಿದು ಮೊದಲು ಒಬ್ಬನೇ ಹೋಗಿ ಅವರನ್ನು ಭೇಟಿ ಮಾಡಿದೆ. ನಮ್ಮ ಕುದುರೆಮುಖ ಯೋಜನೆಯ ರೂಪರೇಖೆಗಳನ್ನು ವಿವರಿಸಿದೆ. ನಮಗೆ ಯೂನಿವರ್ಸಿಟಿಯಿಂದ ಧನಸಹಾಯ ದೊರೆಯಬಹುದೇ ಹೇಗೆ ಎಂದು ಮನವಿ ಮಾಡಿದೆ. "ಅದರ ಪೂರ್ಣ ಮಾಹಿತಿಯಿರುವ ಪತ್ರವನ್ನು ನಮಗೆ ಕೊಡಿ. ಸಹಾನುಭೂತಿಯಿಂದ ಪರಿಶೀಲಿಸುತ್ತೇವೆ" ಎಂದರು.

ದೊರೆಗಳಿಗೆ ಈ ಸಂತೋಷದಾಯಕ ಸುದ್ದಿ ತಿಳಿಸಿದೆ ಮತ್ತು ಸುಮಾರು ಒಂದೂವರೆ ಸಾವಿರ ರೂಪಾಯಿಯ ಯೋಜನೆ ತಯಾರಿಸಿದೆ. ಅದನ್ನು ನೋಡಿದ ಅವರು ನಕ್ಕು, "ಇಲ್ಲೇ ನೀನು ಅತಿ ಜಿಗುಟಾಗಿರುವುದು! ವ್ಯಕ್ತಿಗಳಿಗೆ ಸಾವಿರ, ಸಾವಿರದ್ದೈನೂರು ದೊಡ್ಡ ಹಣ. ಆದರೆ ಇಲ್ಲಿ ಕೊಡುತ್ತಿರುವುದು ಯೂನಿವರ್ಸಿಟಿ. ಹೋಗುತ್ತಿರುವವರು ೩೦–೪೦ ಮಂದಿ ಹುಡುಗರು.  ಅವರ ಆಹಾರದ ಖರ್ಚೇ ಸುಮಾರು ಸಾವಿರದ್ದೈನೂರು ಆಗದಿರದು. ವಾಹನ, ಇತರ ಖರ್ಚು ಒಟ್ಟು ರೂ ೩೦೦೦ದ ಅಂದಾಜು ನಾನು ಮಾಡುತ್ತೇನೆ. ಅಲ್ಲದೇ ಇಂಥ ಸಂದರ್ಭದಲ್ಲಿ ಸ್ವಲ್ಪ ಶಿಕ್ಷಣ ಸಾಮಗ್ರಿಗಳನ್ನು ಖರೀದಿಸುವ ಯೋಜನೆಯೂ ಸೇರಬೇಕು. ೨೦೦ ಅಡಿ ಉದ್ದದ ನೈಲಾನ್ ಹಗ್ಗ ಒಂದೊಂದಕ್ಕೂ ೧೬೫ರಿಂದ ೨೦೦ ರೂಪಾಯಿ ಬೆಲೆಯಿದೆ. ಆದ್ದರಿಂದ ಸಾಮಗ್ರಿಗಳ ಬೆಲೆ ೨೦೦೦ ರೂಪಾಯಿಯಾದರೂ ಇರತಕ್ಕದ್ದು. ಹೀಗೆ ೫೦೦೦ ರೂಪಾಯಿ ಮುಂಗಡವಾಗಿ ನಾವು ಯಾಚಿಸಬೇಕು. ಕೇಳುವಾಗ ಧಾರಾಳವಾಗಿರೋಣ, ಸರಿಯಾದ ಲೆಕ್ಕ ಕೊಟ್ಟರೆ ಆಯಿತು" ಎಂದು ವಿವರಿಸಿದರು.

# ಒರತೆ ತೊರೆಯಾದಾಗ

### ಅಧ್ಯಾಯ ಆರು

ಮುಂದಿನ ವಾರ ನಮ್ಮ ಯೋಜನೆಯ ಪತ್ರ ಸಮೇತ ನಾವು ಕುಲಪತಿಗಳನ್ನು ನೋಡಿದೆವು. ಅವರು ನಮಗೆ ಆಶ್ಚರ್ಯವಾಗುವಂತೆ, ನೀವು ಮುಂದುವರಿಸಿ, ಈ ಮೊಬಲಗು ನಿಮಗೆ ಸಿಕ್ಕುತ್ತದೆ" ಎಂದುಬಿಟ್ಟರು! ಆ ಗಳಿಗೆಯಲ್ಲಿ ನಾವು ಮೂಕವಿಸ್ಮಿತರಾದೆವು. ಪಾರ್ಕಿಲಾಂ ಮಂತ್ರ ಪಠನದ ಈ ಕಾಲದಲ್ಲಿ, ನೂರಾರು ಸಲ ಕಂಬದಿಂದ ಮೇಜಕ್ಕೆ ಅಲೆಯದೇ ಯಾವ ಕೆಲಸವೂ ಆಗದ ಈ ದಿನಗಳಲ್ಲಿ, ಮೊದಲೇ ನಾವೇಕೆ ಈ ಯೋಜನೆಯನ್ನು ಮಂಡಿಸಲಿಲ್ಲ ಎನ್ನುವಂಥ ಸವಾಲು. ಬಲು ಸಂತೋಷದಿಂದ ಹಿಂತಿರುಗಿದೆವು.

ಇಂಗ್ಲಿಷಿನಲ್ಲಿ ಹೇಳುವಂತೆ ಚೆಂಡು ಈಗ ನಮ್ಮ ರಂಗದಲ್ಲಿದೆ. ನಮ್ಮ ಮೇಲೆ ವಿಶ್ವವಿದ್ಯಾಲಯ ವಹಿಸಿರುವ ವಿಶ್ವಾಸ ಗುರುತರವಾದದ್ದು. ಇದುವರೆಗೆ ನಾವು ಮಾಡಿದ್ದು ಚಂದ, ನವ ಸಂಪ್ರದಾಯದ ಲೇಪ ಅದಕ್ಕೆ. ಆದರೆ ಈಗ ವಿಶ್ವವಿದ್ಯಾಲಯದ ವಿಶ್ವಾಸ, ಕ್ಯಾಡೆಟ್ಟುಗಳ ಉತ್ಸಾಹ ಇವನ್ನು ವ್ಯವಸ್ಥಿತವಾಗಿ ಒಂದುಗೂಡಿಸಿ ಉತ್ತಮ ಫಲಿತಾಂಶ ತರುವುದು ನಮ್ಮ ಹೊಣೆಗಾರಿಕೆ, ಮುಂದಿರುವ ಹೆಜ್ಜೆಗಳು: ಶಿಬಿರದ ಸ್ಥಳ ಪರಿಶೀಲನೆ, ಹೊರಡುವ ದಿವಸ ನಿರ್ಣಯ, ಕ್ಯಾಡೆಟ್ಟುಗಳ ಆಯ್ಕೆ, ಶಿಕ್ಷಣ ಸಾಮಗ್ರಿ ಮತ್ತು ಇತರಾವಶ್ಯಕತೆಗಳ ಏರ್ಪಾಡು.

ಸ್ಥಳ ಪರಿಶೀಲನೆಗಾಗಿ ನಾನೂ ದೊರೆಗಳು ಎನ್ನಿಸಿ ಕಾರಿನಲ್ಲಿ ಚಾರ್ಮಾಡಿ ಮಾರ್ಗವಾಗಿ ಧರ್ಮಸ್ಥಳ, ಬೆಳ್ತಂಗಡಿ ತಲಪಿದೆವು. ಸ್ಥಳ, ಜನ, ಸನ್ನಿವೇಶ ಇವುಗಳ ನಿಕಟ ಪರಿಚಯ ಬೆಳೆಸಿಕೊಂಡು ಜನವರಿ (೧೯೬೭) ಅಂತ್ಯದಲ್ಲಿ ಶಿಬಿರ ನಡೆಸುವುದು ಯೋಗ್ಯ ಎಂದು ನಿರ್ಣಯಿಸಿದೆವು. ಅದಕ್ಕಿಂತ ಮೊದಲು ಆಳೆರಡೆತ್ತರ ಬೆಳೆದಿರುವ ಹುಲ್ಲಿನ ಕಡಲಿನಲ್ಲಿ ಬೆಟ್ಟ ಹತ್ತುವುದು ಅಸಾಧ್ಯ. ಮಧ್ಯೆ ಎಲ್ಲಿಯಾದರೂ ಕಾಡಿಗೆ ಬೆಂಕಿ ಬಿದ್ದರೆ ಖಾಂಡವ ದಹನದ ಪುನರಾವರ್ತನೆಯೇ ಆಗಬಹುದು. ದಿವಸ ಮುಂದುವರಿಸಿದರೆ ಸೀನಿಯರ್ ವಿದ್ಯಾರ್ಥಿಗಳಿಗೆ ದೊಡ್ಡ ಪರೀಕ್ಷೆ ಹತ್ತಿರವಾಗುವುದು. ಆದ್ದರಿಂದ ತೊಂದರೆ. ಏಪ್ರಿಲ್, ಮೇ ಕುದುರೆಮುಖದ ಬುಡದಲ್ಲಿ ಕುದಿವ ಕುಲುಮೆಯಂಥ ಸೆಕೆ, ಮೇಲೆ ಮೋಡ, ಮಳೆ. ಜನವರಿ ೨೦ರಿಂದ ೨೯ರವರೆಗೆ ಹತ್ತು ದಿವಸ ಶಿಬಿರ ನಡೆಸುವುದು ಎಂದು ನಿಶ್ಚೈಸಿದೆವು.

ನಮಗೆ ಯೂನಿವರ್ಸಿಟಿ ಸಹಾಯ ದೊರೆತ ಶುಭ ಸಮಾಚಾರ ವಿದ್ಯಾರ್ಥಿಲೋಕದಲ್ಲಿ ವಿದ್ಯುದ್ವೇಗದಿಂದ ಪಸರಿಸಿತು. ಕನಸಿನ ಕುದುರೆಮುಖ ವಾಸ್ತವತೆಗೆ ಬರುವುದೆಂದು ಅವರಿಗೀಗ ಖಚಿತವಾಯಿತು. ನೂರಾರು ಹುಡುಗರು, ಬೇರೆ ಕಾಲೇಜಿನವರು ಸಹ, ದಿನ ದಿನ ಬಂದು ನನ್ನನ್ನು ಬೇಡತೊಡಗಿದರು, ತಾವೂ ಕುದುರೆಮುಖದ ತಂಡದವರನ್ನು ಸೇರುವುದಾಗಿ ಮತ್ತು ಹಣದ ಕೊರತೆಯನ್ನು ಪೂರೈಸುವುದಾಗಿ ಮಾತು ಕೊಟ್ಟರು. ನಮ್ಮ ತರುಣರ ಆಸೆ ಆಕಾಂಕ್ಷೆ ಸಹಜವಾದದ್ದು. ನಮಗೆ ಅಭಿಮಾನ ಉಂಟುಮಾಡುವಂಥಾದ್ದು. ಆದರೆ ನಮ್ಮ ಮುಂದಿದ್ದ ಗುರಿಸಾಧನೆಯಲ್ಲಿ ನಾವು ಕೆಲವು ಸ್ವಯಂ ನಿರ್ಮಿತ ನಿಯಮಾವಳಿಗಳಿಂದ ಬಂಧಿತರಾಗದೇ ಹೋದರೆ, ಒಂದು ಕ್ರಮ ಅನುಸರಿಸದೇ ಮುಂದುವರಿದರೆ, ಕುದುರೆಮುಖ ಸಾಹಸ, ಕುದುರೆ ಮುಖ ಜಾತ್ರೆಯಾದೀತು, ದುರಂತವೂ ಘಟಿಸೀತು. ಈ ದೃಷ್ಟಿಯಿಂದ ನಮ್ಮ ಕಾಲೇಜಿನ ಕ್ಯಾಡೆಟ್ಟುಗಳಿಗೆ ಮಾತ್ರ ಇದರಲ್ಲಿ ಪ್ರವೇಶವೆಂದು ವಿಧಿಸಿದೆವು. ಕೆಲವು ರಾಜಕಾರಣಿಗಳೊಡನೆ ಕಟುವಾಗಿ



ವಾದಿಸಲೂಬೇಕಾಯಿತು, "ಕುದುರೆಮುಖ ಅಲ್ಲಿದೆ, ಯೂನಿವರ್ಸಿಟಿ ಇಲ್ಲಿದೆ. ನೀವು ಪ್ರತ್ಯೇಕವಾಗಿ ನಮಗಿಂತಲೂ ಉತ್ತಮವಾದ ಸಾಹಸವನ್ನೇಕೆ ವ್ಯವಸ್ಥೆಗೊಳಿಸಬಾರದು?"

ಸಾಮಾನ್ಯವಾಗಿ ಜನ, ತಿಳಿದೋ ತಿಳಿಯದೆಯೋ ಕೆಲಸಮಾಡದೆ ಅದರ ಫಲ ಸವಿಯಬೇಕೆಂಬ ಬುದ್ಧಿಯವರು. ಇನ್ನು ನಮ್ಮ ಹುಡುಗರೇ ಆದರೂ ಮೊದಲು ಕರೆದ ಮೀಟಿಂಗಿಗೆ ನಾಲ್ಕುನೂರರವರೆಗೆ ಬಂದರು. ಕಾಲೇಜಿನ ಸಭಾಂಗಣದಲ್ಲಿ, ಪಂಖಗಳ ಅಡಿಯ ತಂಪು ಹವೆಯಲ್ಲಿ ಸುಖಾಸೀನರಾದ ಅವರು ಕುದುರೆಮುಖದ ರಂಗು ರಂಗಾದ ವರ್ಣನೆಯನ್ನು ಏಕಾಗ್ರತೆಯಿಂದ ಆಲಿಸಿ ಕನಸು ಕಾಣತೊಡಗಿದರು.

"ಕುದುರೆಮುಖ ಗಂಡು ಗಂಡುಗಳಿಗೆ ಮಾತ್ರ. ನಿಮ್ಮಲ್ಲಿ ಯಾರಿಗೆ ಏರಲು ಸಾಧ್ಯವಿಲ್ಲ, ಕೈ ಎತ್ತಿ" ಎಂದು ಸಮಾರೋಪಿಸಿದೆ. ಬಂದವರು ನಾಲ್ಕುನೂರು, ಎಲ್ಲರೂ ಗಂಡು ಗಂಡುಗಳೇ; ಕೈ ಎತ್ತಿದವರು ಯಾರೂ ಇಲ್ಲ. "ಬಹಳ ಸಂತೋಷ. ನನಗೆ ತುಂಬ ಹೆಮ್ಮೆ, ಇಂಥ ಕಠಿಣ ಶಿಬಿರಕ್ಕೆ ಬರಲು ನೀವು ಕೆಲವು ನಿಯಮಗಳನ್ನು ಪಾಲಿಸಲೇಬೇಕು: ಮುಂದಿನ ಆದಿತ್ಯವಾರ ೧೨ನೇ ಮೈಸೂರಿನ ೬.೪೫ ಗಂಟೆ ಬೆಳಗ್ಗೆ ಕಾಲೇಜು ಹಿಂದೆ ಸಮವಸ್ತ್ರಧಾರಿಗಳಾಗಿ ಸೇರತಕ್ಕದ್ದು; ೧೫ರಿಂದ ೨೦ ಮೈಲುಗಳವರೆಗಿನ ದೀರ್ಘ ನಡಿಗೆ. ಇದರಲ್ಲಿ ಜಯಪ್ರದರಾಗುವ ಮೊದಲಿನ ೬೦ ಅಥವಾ ೭೦ ಕ್ಯಾಡೆಟ್ಟುಗಳಿಗೆ ಮುಂದಿನ ಹೆಜ್ಜೆ ವಿವರಿಸಲಾಗುವುದು."

# ಗಂಡುಗಳ ಆಯ್ಕೆ

### ಅಧ್ಯಾಯ ಏಳು

ಆ ಆದಿತ್ಯವಾರ ಬಂದವರು ೧೧೧. ಎರಡು ಮಿನಿಟ್ ತಡವಾಗಿ ಬಂದವರಿಗೆ ಮುಂದಿನ ವರ್ಷದ (?) ಶಿಬಿರ! ಇನ್ನು, ೧೫ ಮೈಲು ನಡಿಗೆ ಊಹಿಸಿದಷ್ಟು ಸುಲಭವಲ್ಲ, ಸೈಕಲ್, ಆಟೋ, ಸಿಟಿ ಬಸ್ ಸಂಸರ್ಗಗಳಿಂದ ವಿಕಸಿಸುವ ಹುಡುಗರಿಗೆ ಇದೊಂದು ಭಯಂಕರಾನುಭವ! ಬಹಳಷ್ಟು ಮಂದಿ ನಡುದಾರಿಯಲ್ಲಿ ಮನೆಯೆಡೆಗೆ ಕವಲೊಡೆದು ಕಾಣದಾದರು. ಯಶಸ್ವಿಯಾಗಿ ನಡಿಗೆ ಪೂರೈಸಿದ ಮೊದಲಿನ ೬೦ ಮಂದಿಯನ್ನು ಆರಿಸಲಾಯಿತು. ಉಳಿದವರು 'ದ್ರಾಕ್ಷಿ ಹುಳಿ' ಎಂದು ಮುಖ ಸಿಂಡರಿಸಿದರು.

ಈ ೬೦ ಮಂದಿಗೆ ಎರಡನೆಯ ಹೆಜ್ಜೆ ಬಂಡೆ ಏರುವುದು, ಇಳಿಯುವುದರಲ್ಲಿ ಶಿಕ್ಷಣ ಮತ್ತು ಪರೀಕ್ಷೆ. ಬಂಡೆಯ ಅಂಚಿಗೆ ಬಂದ ಹಲವಾರು ಹುಡುಗರು ಹಿಂದೆ ಸರಿದರು. ಹೀಗೆ ಸಂಖ್ಯೆ ೪೦ಕ್ಕೆ ಇಳಿಯಿತು. ಇವರ ಪೈಕಿ ಮೂರು ಹುಡುಗರು ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಲಿಲ್ಲ. ಈ ರೀತಿಯಲ್ಲಿ ನಮ್ಮ ಬೆಟ್ಟೆ ಚಿನ್ನವನ್ನು ಪುಟ ಹಾಕಿ ಶುದ್ಧ ಮಾಡಿದೆವು. ಇವರಲ್ಲಿ ಪ್ರತಿಯೊಬ್ಬನೂ ೧೦ ರೂಪಾಯಿ ಪ್ರವೇಶ ಧನವೀಯಬೇಕು ಮತ್ತು ಸ್ವಂತ ಖರ್ಚಿನಿಂದ 'ಹಂಟರ್ ಬೂಟು'ಗಳನ್ನು ಕೊಂಡುಕೊಳ್ಳಬೇಕೆಂದೂ ವಿಧಿಸಿದ್ದೆವು. ತಂದೆ ತಾಯಿಯರಿಂದ ಬರಹದಲ್ಲಿ ಅಪಾಯದ ಸರ್ಟಿಫಿಕೇಟು ತರಿಸಿಕೊಂಡೆವು. ಇದರ ಪ್ರಕಾರ ಹುಡುಗ ಸ್ವಂತ ಇಚ್ಛೆಯಿಂದ ಮತ್ತು ತಂದೆತಾಯಿಯರ ಅನುಮತಿಯ ಮೇರೆಗೆ ಶಿಬಿರಕ್ಕೆ ಬರುವವನು; ಅಲ್ಲಿ ಯಾವ ಅಥವಾ ಹೇಗೆ, ಎಂಥ ಅಪಾಯ ಸಂಭವಿಸಿದರೂ ಹುಡುಗನಾಗಲೀ ಅವನ ತಂದೆತಾಯಿಯರಾಗಲೀ ಸರಕಾರವನ್ನು ಪರಿಹಾರಧನ ಯಾಚಿಸುವಂತಿಲ್ಲ. ಇದರರ್ಥ ವ್ಯವಸ್ಥೆಗೊಳಿಸುವ ನಾವು ಹಿರಿಯರು ಬೇಜವಾಬ್ದಾರಿಕೆಯಿಂದ ವರ್ತಿಸಬಹುದೆಂದಲ್ಲ. ಹುಡುಗರನ್ನು ಕಾಲೇಜಿಗೆ, ಶಿಬಿರಕ್ಕೆ ಕಳಿಸಿದರೆ ತಮ್ಮ ಹೊಣೆಗಾರಿಕೆ ಮುಗಿಯಿತೆಂದು ತಿಳಿಯುವ, ಪರಮೋಸದಿಂದ ಅಥವಾ ಎಷ್ಟೋ ಸಲ ಹುಡುಗನ ತಿಳಿಗೇಡಿತನದಿಂದ ಅವನಿಗೇನಾದರೂ ಅಪಾಯ ಸಂಭವಿಸಿದರೆ ಮೊದಲು ಸಂಸ್ಥೆಯಲ್ಲಿ ದೋಷ ಹುಡುಕುವ ಹಿರಿಯರಿಗೆ ಅವರ ಪಾತ್ರವನ್ನು ಸ್ಪಷ್ಟಪಡಿಸಲು ಇಂಥ ಸರ್ಟಿಫಿಕೇಟು ಅತ್ಯಗತ್ಯ. ಮನೆಯಲ್ಲಿ ಕಲಿಸದ ಶಿಸ್ತು, ಸದ್ವರ್ತನೆಗಳನ್ನು ಕಾಲೇಜು ಕ್ಲಾಸುಗಳಲ್ಲಿ, ಎನ್‌ಸಿಸಿ ಪೆರೇಡ್ ಗ್ರೌಂಡಿನಲ್ಲಿ ಕಲಿಸಲು ಸಾಧ್ಯವಿಲ್ಲ. ನೀತಿ: ನಿಮ್ಮ ಪುತ್ರರತ್ನ ಪುರುಷ ಸಿಂಹನಾಗಬೇಕೆಂಬುದು ನಿಮ್ಮ ಅಪೇಕ್ಷೆಯಾದರೆ ನೀವು ಕನಿಷ್ಠ ನರಶೃಗಾಲವಾದರೂ ಆಗಿರಬಾರದು!

# ಸಾವನದುರ್ಗದ ಜಾರುಬಂಡೆಯ ಮೇಲೆ

**ಅಧ್ಯಾಯ ಎಂಟು**



ಡಿಸೆಂಬರ್ ೨೫ರಿಂದ ಜನವರಿ ೩ರ ತನಕ ನಮ್ಮ ಬೆಟಾಲಿಯನ್ ವಾರ್ಷಿಕ ಶಿಕ್ಷಣ ಶಿಬಿರ ನಡೆಸಲು ಬೆಂಗಳೂರಿನ ಹೊರವಲಯಕ್ಕೆ ಸಾಗಿತು. ಅಲ್ಲಿಂದ ೨೪ ಮೈಲು ದೂರದಲ್ಲಿ ಸಾವನದುರ್ಗವಿದೆ. ಶಿಬಿರದ ಪ್ರಾರಂಭದಲ್ಲಿ ದೊರೆಗಳೆಂದರು, “ನೀನು ಆರಿಸಿರುವ ಶಿಲಾರೋಹಿಗಳನ್ನು ಅಲ್ಲಿಗೆ ಲಾರಿಯಲ್ಲಿ ಕರೆದುಕೊಂಡು ಹೋಗಿ ಒಂದು ದಿನವಿಡೀ ಅಭ್ಯಾಸ ಮಾಡಿ ಬಾ. ನಾವಿಬ್ಬರೂ ಈ ಕ್ಯಾಂಪನ್ನು ಒಂದೇ ಸಲ ಬಿಟ್ಟು ಹೋಗುವುದು ಸರಿಯಲ್ಲವಾದ್ದರಿಂದ ನೀನೊಬ್ಬನೇ ಹೋಗು.”

೨೪ ಹುಡುಗರ ತಂಡ. ಹೈಸ್ಕೂಲಿನಲ್ಲಿ ಓದುತ್ತಿದ್ದ ನನ್ನ ಹಿರಿಮಗ ಅಶೋಕನೂ ಸ್ವಯಂಪ್ರೇರಿತನಾಗಿ ಶಿಬಿರದ ಶಿಸ್ತಿಗೆ ಬದ್ಧವಾಗಿ ಇದರಲ್ಲಿದ್ದ. ಬುತ್ತಿ ಊಟ ಕಟ್ಟಿಕೊಂಡು ಬೆಳಗ್ಗಿನ ೬ ಗಂಟೆಗೆ ಕ್ಯಾಂಪಿನಿಂದ ಹೊರಟೆವು. ೮ ಗಂಟೆಗೆ ದುರ್ಗದ ಬುಡ ತಲಪಿದೆವು. ನೆಲದಿಂದ ನೇರವಾಗಿ ಆಗಸಕ್ಕೆ ಚಾಚಿರುವ ಆ ಭೀಮಾಕಾರದ ಕರಿಯ ಕಲ್ಲುಗುಡ್ಡೆಯ ಎತ್ತರ ೨೦೦೦ ಅಡಿಗಿಂತಲೂ ಹೆಚ್ಚು ಇರಬೇಕೆಂದು ಅಂದಾಜು. ಅದರ ಶಿಖರದಲ್ಲಿಯ ಬಸವನೆಡೆಗೆ ಏರಲು ನೆಲದಿಂದ ಬಳಸು ಕಾಲುದಾರಿಯಿದೆ. ಆದರೆ ನಾವು ಹೋದುದು ನೇರವಾಗಿ ಆ ಕಡಿದಾದ ಶಿಲಾರೋಹಣ ಮಾಡಲೆಂದು; ಹೇಗಾದರೂ ಕೊಡಿ ತಲಪುವುದಲ್ಲ. ಸಾಹಸ ಪ್ರಯೋಗದಿಂದ ಶಿಖರಾರೋಹಣ ನಮ್ಮ ಗುರಿ. ನಮ್ಮ ಬೆನ್ನ ಮೇಲೆ ಹ್ಯಾವರ್ ಸ್ಯಾಕಿನಲ್ಲಿ ಬುತ್ತಿ, ಮೂಸುಂಬಿ, ಸ್ವಲ್ಪ ಬಟ್ಟೆ. ಲಕ್ಷ್ಮಿ ಮೊದಲಾದ ವಿದ್ಯಾರ್ಥಿ ನಾಯಕರು ನೈಲಾನ್ ಹಗ್ಗಗಳ ಹೊರೆ ಹೊತ್ತಿದ್ದರು. ನಾವು ಕಾಲಿಗೆ ಬೂಟು ಧರಿಸಿದ್ದುದು ತಪ್ಪು, ಬಂಡೆ ಏರಲು ಇದು ದೊಡ್ಡ ಪ್ರತಿಬಂಧ. ಬೂಟಿನಡಿಯ ದೊರಗು ಮತ್ತು ಅಲ್ಲಿ ಹೊಡೆದಿರುವ ಆಣಿಗಳು ಬಂಡೆಯ ಮೇಲೆ ಜಾರಿ ನಮಗೆ ಎಲ್ಲಿಯೂ ದೃಢವಾಗಿ ನಿಲ್ಲುವುದು ಸಾಧ್ಯವಾಗಲಿಲ್ಲ. ಮೊದಲಿನ ೫೦ ಗಜ ನೇರವಾಗಿ ಏರುವಾಗ, ಏರಿಕೆ ಅಷ್ಟೇನೂ ತೀವ್ರವಾಗಿರದೆ ಬೂಟುಗಳಿಂದ ತೊಂದರೆಯಾಗಲಿಲ್ಲ. ಆದರೆ ಮುಂದೆ ಹತ್ತಬೇಕಾದರೆ ಬರೇ ಕಾಲಿನ ನಡಿಗೆಯೊಂದೇ ಗತಿ. ಬೂಟುಗಳನ್ನು ಕಳಚಿ ಒಂದರ ಲೇಸನ್ನು ಇನ್ನೊಂದಕ್ಕೆ ಕಟ್ಟಿ ಹೆಗಲ ಮೇಲೆ ಬೂಟುಮಾಲೆ ಧರಿಸಿದೆವು. ಮುಂದಕ್ಕೆ ಕೈಕಾಲುಗಳ ಸಹಾಯದಿಂದ ತೆವಳಿ ಹತ್ತಿದೆವು. ಬಿರುಕುಗಳಿಗೆಲ್ಲ ಕೈಕಾಲು ತುರುಕಿ ದೇಹವನ್ನು ಮೇಲೆ ಮೇಲೆ ಸಾಗಿಸಿದೆವು. ಒಂದು ಘಟ್ಟಕ್ಕೆ ಬರುವಾಗ ಮೇಲೆ ಹತ್ತುವುದು ಸಾಧ್ಯವೇ ಇಲ್ಲ ಎಂದಾಯಿತು. ಕಲ್ಲು ಸ್ವಲ್ಪ ಒಳಕ್ಕೆ ನುಗ್ಗಿ ಮತ್ತೆ ನಮ್ಮ ಮೇಲೆಯೇ ಉಬ್ಬಿ ಚಾಚಿತ್ತು. ಆದ್ದರಿಂದ ಬದಿಗೆ ಸರಿದು ಈ ಉಬ್ಬನ್ನು ಬಳಸಿ ಹತ್ತಬೇಕು. ಸ್ವಲ್ಪ ವಿಶ್ರಮಿಸೋಣ ಎಂದು ಬಂಡೆಯ ಮೇಲೆ ಕುಳಿತು ನೋಡುತ್ತೇವೆ – ನಾವು ಹತ್ತಿದ ಎತ್ತರ ಮತ್ತು ಏರಿಕೆಯ ತೀವ್ರತೆ ಭಯ ಹುಟ್ಟಿಸುವಂತಿದ್ದುವು. ನೆಲ ಅಷ್ಟು ದೂರ ಅಷ್ಟು ಕೆಳಗೆ ಇತ್ತು. ಅದನ್ನೇ ದಿಟ್ಟಿಸುತ್ತ ಕುಳಿತರೆ ನೆಲ ನಮ್ಮನ್ನು ನುಂಗಲು ಬರುವುದೋ ಎನ್ನುವ ದಿಗಿಲು ಹುಟ್ಟಿಸುತ್ತಿತ್ತು. ನೆಲ ನೋಡುತ್ತಿದ್ದಂತೆಯೇ ಮುಂದಿನ ಹಾದಿಯ ದುರ್ಗಮತೆಯ ಅರಿವೂ ಹೆಚ್ಚಾಯಿತು. ಮೇಲೆ ನೂರಾರು ಅಡಿ ಇನ್ನೂ ಕಡಿದಾಗಿ ಸಾಗಬೇಕು. ಈ ಮಧ್ಯೆ ಬಂಡೆ ಬಿಸಿಲಿನಿಂದ ಕಾದು ಅಲ್ಲಿ ಕುಳಿತಿರುವುದು ಅಸಾಧ್ಯವಾಯಿತು. ಬರಿಗಾಲು ಬರಿಗೈ ಸುಡತೊಡಗಿದುವು. ಹೀಗಾಗಿ ಚಲಿಸದೇ ಉಪಾಯವಿಲ್ಲ. ಲಕ್ಷ್ಮಿ, ಮೋಹನರು ಅಲ್ಲಿ ಅಡ್ಡ ಬಳಸು ದಾರಿಯಲ್ಲಿ ಮುಂದುವರಿದರು. ಮೂರು ಪತ್ಯೇಕ ನೈಲಾನ್ ಹಗ್ಗಗಳನ್ನು ತೆಗೆದುಕೊಂಡು ಆರೇಳು ಜನರ ಮೂರು ತಂಡಗಳಾಗಿ ನಮ್ಮನ್ನು ವಿಂಗಡಿಸಿ ಒಂದೊಂದು ತಂಡದವರನ್ನು ಒಂದೊಂದು ಹಗ್ಗದಿಂದ ಬಂಧಿಸಲಾಯ್ತು. ಮೊದಲಿನವನು ಸಾಹಸಿ, ಗಟ್ಟಿಮುಟ್ಟಾದವನಾಗಿರುವುದು ಅಗತ್ಯ. ಹಗ್ಗದ ಒಂದು ಕೊನೆಯನ್ನು ಅವನ ಸೊಂಟಕ್ಕೆ ಕಟ್ಟಲಾಗುವುದು. ಸುಮಾರು ಹತ್ತಡಿ ದೂರದಲ್ಲಿ ಇನ್ನೊಬ್ಬ. ಹೀಗೆ ಆರೇಳು ಜನರ ಒಂದು ಮಾನವ ಸರಪಳಿ ನಿರ್ಮಾಣವಾಗುವುದು. ಮೊದಲಿನವನು ತೆವಳಿ ಹರಿದು ಒಂದು ನೆಲೆಯಲ್ಲಿ ಸಾಕಷ್ಟು ಭದ್ರವಾಗಿ ನಿಲ್ಲುತ್ತಾನೆ. ಎರಡನೆಯವನಿಗಿಂತ ಹತ್ತು ಅಡಿ ಮುಂದೆ ಅವನು ಹೋಗುವಂತಿಲ್ಲವಷ್ಟೆ. ಹಾಗೆ ಸರಿಯುವಾಗ ಅವನನ್ನು ಹಿಂದಿನವನು ಹಗ್ಗದ ಹಿಡಿತದಿಂದ ಜಾರದಂತೆ ರಕ್ಷಣೆ ಕೊಡಲು (ಬಿಲೇ) ಸಾಧ್ಯವಾಗುತ್ತದೆ. ಮೊದಲನೆಯವನು ನಿಂತೊಡನೆ ಅವನು ಎರಡನೆಯವನನ್ನು ಬಿಲೇ ಮಾಡುತ್ತಾನೆ. ಇವನನ್ನು ಮೂರನೆಯವನು ಸಹ ಬಿಲೇ ಮಾಡುತ್ತಿರುತ್ತಾನೆ. ಮುಂದೆ ಮೂರನೆಯವನು ತೆವಳುತ್ತಾನೆ. ಈ ಮಧ್ಯೆ ಒಂದೇ ಕಡೆ ಮೂರು ಜನ ಸೇರುವುದು ಅಪಾಯಕರವಾದರೆ ಮೊದಲನೆಯವನು ಮುಂದೆ ಹೋಗಬಹುದು. ಮುಖ ತತ್ತ್ವವಿಷ್ಟು: ಒಂದು ಸಲಕ್ಕೆ ಒಬ್ಬ ಮಾತ್ರ ತೆವಳುತ್ತಿರಬೇಕು. ಉಳಿದವರು ಇರುವಲ್ಲಿಯೇ ಭದ್ರವಾಗಿ ಬಂಡೆಗೆ ಅಂಟಿಕೊಂಡಿರಬೇಕು. ಇದರಿಂದ ಸರಿಯುತ್ತಿರುವವನ ಕಾಲು ಜಾರಿ ಸಮತೋಲ ತಪ್ಪಿದ ಸಂದರ್ಭದಲ್ಲಿ ಉಳಿದವರು ಅವನನ್ನು ಹಿಡಿತದಲ್ಲಿಟ್ಟು ರಕ್ಷಿಸಲು ಸಾಧ್ಯವಾಗುವುದು.

ಇದೊಂದು ಬಗೆಯ ಟಪ್ಪೆ ಸರಿತ (relay movement), ಸಹಜೀವನ, ಸಹಕಾರ ಪದಗಳ ಸರಿಯಾದ ಅರ್ಥ ಅಪಾಯಕರ ಪ್ರಪಾತದೆದುರು ತಿಳಿಯುವಷ್ಟು ಚೆನ್ನಾಗಿ ಬೇರೆಲ್ಲಿಯೂ ಅರಿವಿಗೆ ಬರದು. ಮೇಲಿನ ಕ್ರಮದ ಚಲನೆಗೆ ಕಂಬಳೀಹುಳು ಸರಿತ ವಿಧಾನ ಎಂದು ಹೆಸರು. ದೊಡ್ಡ ಕಂಬಳೀಹುಳುವಿನ ವಿಧಾನದಲ್ಲಿ ಒಂದು ಗಂಟೆ ಸರಿದು ಬೆಟ್ಟದ ಎರಡು ಮೈಸೇರಿದ ನಿರಿಗೆ ಪ್ರದೇಶವನ್ನು ತಲಪಿದೆವು. ಇಂಥ ಒಂದು ಸರಪಳಿಯಲ್ಲಿ ಅಶೋಕ ಮತ್ತು ನಾನು ಕೂಡ ಇದ್ದೆವು. ಉರುಳಿದರೆ ಒಂದೇ ಬುಟ್ಟಿಯಲ್ಲಿ ಎಲ್ಲ ಮೊಟ್ಟೆಗಳನ್ನು ಇಡಬಾರದು ಎನ್ನುವ ಗಾದೆಗೆ ಇನ್ನೊಂದು ಪುರಾವೆ ಸಿಕ್ಕಿದಂತಾಗುತ್ತಿತ್ತು.

ನಿರಿಗೆಯಲ್ಲಿ ಸ್ವಲ್ಪ ನೆರಳಿತ್ತು. ೧೦೦೦ ಅಡಿ ಎತ್ತರದಲ್ಲಿದ್ದೇವೆ. ಎಡಗಡೆ ಬಲಗಡೆ ಬೆಟ್ಟದ ಉಬ್ಬು ಪ್ರದೇಶಗಳು. ಅಗ್ರಭಾಗ ಇನ್ನೊಂದು ಸಾವಿರ ಅಡಿ ಮೇಲೆ. ಒಂದೋ ಈ ನಿರಿಗೆಯಲ್ಲೇ ಮೇಲೆ ಹೋಗಬೇಕು, ಇಲ್ಲ ಕೆಳಕ್ಕೆ ಇಳಿಯಬೇಕು. ಪುನಃ ಇನ್ನೊಂದು ಮೈಗೆ ಹೋಗುವುದು ಆ ಬಿಸಿಲಿನ ಝಳದಲ್ಲಿ ಸಾಧ್ಯವಿಲ್ಲ. ಮೇಲಿನ ಸಾವಿರ ಅಡಿ ಉಗ್ರವಾಗಿತ್ತು. ನೀರು ಹರಿದು ಹರಿದು ನಿರಿಗೆ ಬಲು ನುಣುಪಾಗಿತ್ತು.ನಮ್ಮ ಬಳಗದಲ್ಲಿ ಅಶೋಕನ ಸಮೇತ ಎಂಟು ಜನ ಮಾತ್ರ ಈ ಕೊನೆಯ ಸಾಹಸ ನಿರ್ವಹಿಸಲು ಶಕ್ತರು ಎಂದು ನನಗೆ ಇಷ್ಟರಲ್ಲಿ ಮನವರಿಕೆಯಾಗಿತ್ತು. ಅವರನ್ನು ಆರಿಸಿ ಲಕ್ಷ್ಮಿಯ ನೇತೃತ್ವದಲ್ಲಿ ಕಂಬಳೀಹುಳು ಕ್ರಮದಲ್ಲಿ ಮೇಲೆ ಹೋಗಲು ಕಳಿಸಿದೆ. ಉಳಿದವರಲ್ಲಿ ಹಲವರಿಗೆ ಮುಖ ಕಪ್ಪಿಟ್ಟಿತು. ಅವರೆಲ್ಲರೂ ಮೇಲೇರಲು ಅತ್ಯುತ್ಸುಕರಾಗಿದ್ದರು. ಪ್ರತಿಯೊಬ್ಬನೂ ಸಾಹಸ ಪ್ರದರ್ಶನ ಮಾಡಲು ಮುನ್ನುಗ್ಗುವುದು ಸಹಜವೇ. ಅಪಾಯ ಸನ್ನಿವೇಶದಲ್ಲಿ ಮುಂದಾಳುವಿನ ಎದುರು ಹೆಜ್ಜೆ ಹೆಜ್ಜೆಗೆ ಏಳುವ ಪ್ರಶ್ನೆ ಇದೇ: ವೈಯಕ್ತಿಕ ದಕ್ಷಿಣ್ಯಕ್ಕೆಡೆಗೊಡದೇ ನಿಷ್ಪಕ್ಷಪಾತವಾಗಿ ನಿರ್ಧರಿಸಬೇಕು. ಒಂದು ವಿಷಯ ಮುಂದಾಳು ಚೆನ್ನಾಗಿ ತಿಳಿದಿರತಕ್ಕದ್ದು: ಇಂಥ 'ಸ್ವಯಂಕೃತಾಪರಾಧ'ಗಳಲ್ಲಿ ಎಲ್ಲವೂ ಸುಗಮವಾಗಿ ಎಲ್ಲರೂ ಸುರಕ್ಷಿತವಾಗಿ ಮರಳಿದರೆ ಹೊಗಳುವವರು ಕೇವಲ ಕೆಲವರು. ಉಳಿದವರು ಒಂದೋ ತಾತ್ಸಾರ ಮನೋವೃತ್ತಿ ಪ್ರದರ್ಶಿಸುತ್ತಾರೆ, ಇಲ್ಲಾ ಮತ್ಸರಿಗಳಾಗುತ್ತಾರೆ. ಏನಾದರೂ ಅಲ್ಪಸ್ವಲ್ಪ ಪರಮೋಸದಿಂದಲೇ ಆದರೂ ಅಪಾಯ ಘಟಿಸಿದರೆ, ಸಹಾನುಭೂತಿ, ಸಹಾಯ ನೀಡುವವರು ಬೆರಳೆಣಿಕೆಯಲ್ಲಿ ಕೂಡ ಸಿಕ್ಕುವುದಿಲ್ಲ. ಆದರೆ ದೋಷಾರೋಪಣೆ ಮಾಡುವವರು, ಧರ್ಮಾರ್ಥ ಸಲಹೆ ಸೂಚನೆ ನೀಡುವವರು ವಿಪುಲವಾಗಿರುತ್ತಾರೆ. ನಾನು–ಮೊದಲೇ–ಹೇಳಲಿಲ್ಲವೇ–ಮನೋಧರ್ಮೀ ಸರ್ವಜ್ಞರಿವರು! ಇದೆಲ್ಲ ಗೊತ್ತಿದ್ದೂ ಮೆರವಣಿಗೆ ಸಾಗಿಯೇ ಇರುತ್ತದೆ ಅನ್ನಿ. ಇಂಥ ಅಪಾಯ ಎದುರಿಸಿ ಜಯ ಲಭಿಸುವಾಗ ನಮಗೊದಗುವ ಕೃತಾರ್ಥತೆ ಅದನ್ನು ಅನುಭವಿಸಿದವರಿಗೇ ಗೊತ್ತು. "ಬಂಡೆ ಏರುವುದೇಕೆ? ಏರದಿದ್ದರೆ ಅಥವಾ ಬಳಸುದಾರಿಯಿಂದ ಏರಿದರೆ ಆಗದೇ?" ಎಂದು ಏರದವನು ಏರಿದವನನ್ನು ಪ್ರಶ್ನಿಸಿದಾಗ, "ಅದು ಇರುವುದರಿಂದ ಏರಿದೆ. ಏರಿ ಮೇಲೆ ಸೇರಿದ ಮೇಲೆ ಏಕೆ ಏರಿದೆ ಎಂಬುದರ ಅರಿವಾಯಿತು" ಎಂದನಂತೆ. ಕೃತಾರ್ಥತೆಗಾಗಿ ಬಂಡೆ ಏರಬೇಕು.

ಇಳಿಯುವವರ ಜತೆಗೆ ನಾನೂ ಇದ್ದೆ. ಎಷ್ಟೋ ಸಲ ಕಡಿದಾದ ಬಂಡೆ ಇಳಿಯುವುದು ಏರುವುದಕ್ಕಿಂತಲೂ ಕಷ್ಟ. ನಮಗಿಲ್ಲಿ ಅಂಥ ಅನುಭವವಾಯಿತು. ಕಾಲು ಕೆಳಗೆ ಇಳಿಬಿಟ್ಟು ಕುಳಿತು ಕೈಕಾಲುಗಳ ಸಹಾಯದಿಂದ ಜಾರಿ ಇಳಿಯುವುದೊಂದೇ ದಾರಿ. ಒಂದೊಂದು ಸಲಕ್ಕೆ ೫ ಅಡಿ, ೬ ಅಡಿ ದೂರ ಜಾರುತ್ತ ಜಾರುತ್ತ ಆ ೧೦೦೦ ಅಡಿಯನ್ನು ಮುಗಿಸಿದೆವು. ಜಾರುವಿಕೆಯ ಅನುಭವ ಸೊಗಸಾಗಿತ್ತು. ಇಳಿದು ನಿಂತಾಗ ನಮಗೆ ಲಭಿಸಿದ ಬೆಟ್ಟದ ಪ್ರಸಾದ ಗೊತ್ತಾಯಿತು – ನಮ್ಮೆಲ್ಲರ ಖಾಕಿ ಪ್ಯಾಂಟಿನ ಪೃಷ್ಠಭಾಗ ಹರಿದು ಛಿದ್ರವಿಚ್ಛಿದ್ರವಾಗಿತ್ತು! ಸದ್ಯ ನಾವು ಪೇಟೆಯಲ್ಲಿಲ್ಲವಲ್ಲ. ಹಿಂತಿರುಗುವುದು ನಮ್ಮ ಲಾರಿಯಲ್ಲೇ ತಾನೆ ಎಂದು ಸಮಾಧಾನದ ನಿಟ್ಟುಸಿರುಬಿಟ್ಟೆವು. ಮುಂದೆ ಅರ್ಧ ತಾಸಿನಲ್ಲಿ ಬಳಸುದಾರಿಗಾಗಿ ಹತ್ತಿ ಶಿಖರದಲ್ಲಿ ಉಳಿದವರನ್ನು ಸಂಧಿಸಿದೆವು.

ಸಾವನದುರ್ಗದ ತಳದಲ್ಲಿ ನಿಂತು ನಾವು ತೆವಳಿ ಏರಿದ ದಾರಿ ನೋಡಿದಾಗ ಭಯವಾಯಿತು. ತೀರ ದುಡುಕಿದ್ದೆವು. ಹಗ್ಗ ಕಟ್ಟಿಕೊಳ್ಳುವ ಮೊದಲೇ ಯಾರಾದರೂ ಜಾರಿದ್ದರೆ ಮತ್ತೆ ಅವನ ಆಸೆ ಮುಗಿದಂತೆಯೇ. ಕೃತಾರ್ಥತೆಯ ಸಂತೋಷದೊಡನೆ ಈ ನೆನವರಿಕೆ ನನ್ನಲ್ಲಿ ಈಗಲೂ ಚಳಿ ಹುಟ್ಟಿಸುತ್ತದೆ.

ಯೂನಿವರ್ಸಿಟಿಯಿಂದ ಧನಸಹಾಯ ಮುಂಗಡವಾಗಿ ಲಭಿಸಿತು. ಸರಕಾರದಿಂದ ಎನ್‌ಸಿಸಿ ವಿಭಾಗದ ಮೂಲಕ ಒಂದು ಸಾವಿರ ರೂಪಾಯಿ ಶಿಕ್ಷಣ ಸಾಮಗ್ರಿ ಕೊಳ್ಳಲು ದೊರೆಯಿತು. ಡಾರ್ಜಿಲಿಂಗಿನ ಹಿಮಾಲಯ ಪರ್ವತಾರೋಹಣ ಸಂಸ್ಥೆಗೆ ಬರೆದು ನೈಲಾನ್ ಹಗ್ಗ, ಗವಸು ಮುಂತಾದವನ್ನು ತರಿಸಿಕೊಂಡೆವು. ಅಲ್ಲಿಂದ ಒಬ್ಬ ನುರಿತ ಶಿಕ್ಷಕನನ್ನು ನಮ್ಮ ಕುದುರೆಮುಖ ಶಿಬಿರದಲ್ಲಿ ಸಹಾಯಕನಾಗಿ ಬರಲು ಪತ್ರ ಬರೆದೆವು. ಅವನು ಜನವರಿ ೧೫ರ ಸುಮಾರಿಗೆ ಬೆಂಗಳೂರಿಗೆ ಬಂದು ತಲಪಬೇಕಾಗಿತ್ತು. ಮೈಸೂರು ಸರಕಾರದ ವೈದ್ಯ, ಆಹಾರ, ಅರಣ್ಯ ಮುಂತಾದ ಇಲಾಖೆಗಳಿಗೆ ಕಾಗದ ಬರೆದು ಅವರ ಸಹಕಾರ, ಸಹಾಯ ಯಾಚಿಸಿದೆವು. ಎಲ್ಲ ಕಡೆಗಳಿಂದಲೂ ನಮಗೆ ಸಹಕಾರ, ಪ್ರೋತ್ಸಾಹ ಒದಗಿದುವು. ಜನವರಿ ೩ರಂದು ವಾರ್ಷಿಕ ಶಿಕ್ಷಣ ಶಿಬಿರ ಮುಗಿಸಿ ಮರಳುವಾಗ ಕುದುರೆಮುಖ ಕೈ ಅಳತೆ ದೂರದಲ್ಲಿರುವಂತೆ ಭಾಸವಾಯಿತು.

# ಬರಸಿಡಿಲು ಬಡಿಯಿತು

## ಅಧ್ಯಾಯ ಒಂಬತ್ತು

ಹೀಗೆ ನಮ್ಮ ವಿಶಿಷ್ಟ ಪ್ರಯತ್ನಗಳೂ ನಾಟಕವೊಂದರಲ್ಲಿ ಸನ್ನಿವೇಶಗಳು ಮೊದಲೇ ನಿಯಮಿಸಿದಂತೆ ಅನಾವರಣಗೊಳ್ಳುವ ರೀತಿಯಲ್ಲಿ, ಕುದುರೆಮುಖದೆಡೆಗೆ ಸಂಗಮಿಸಿ ಹರಿಯುತ್ತಿದ್ದುವು. ಈ ಘಟನಾಪರಂಪರೆಗಳನ್ನು ಅವುಗಳಿಂದ ಪ್ರತ್ಯೇಕವಾಗಿ ನಿಂತು ಸಿಂಹಾವಲೋಕಿಸುವಾಗ ನನಗೇ ಆಶ್ಚರ್ಯವಾಗುತ್ತಿತ್ತು. ಯಾವ ಶಕ್ತಿ ಒಂದು ಕಡೆ ನಮಗೆ ಪ್ರೇರಣೆ, ಚೇತನ ನೀಡಿ ಇವನ್ನು ನಮ್ಮಿಂದ ನಿರ್ವಹಿಸುವಂತೆ ಮಾಡುತ್ತಿದ್ದಿತೋ ಅದೇ ಶಕ್ತಿ ಇನ್ನೊಂದು ಕಡೆ ಒಂದು ದೊಡ್ಡ ದುರಂತ, ದುಃಖಮಯ ಘಟನೆಗೂ ಅದೇ ವೇಳೆ ಪೀಠಿಕೆ ಹಾಕುತ್ತಿದ್ದಿತು.

ನಮ್ಮ ಶಿಕ್ಷಣ ಮುಗಿದ ದಿವಸ ದೊರೆಗಳು, "ಸ್ವಲ್ಪ ಅರ್ಜೆಂಟಾಗಿ ನಾನು ಬೆಂಗಳೂರಿಗೆ ಹೋಗಬೇಕಾಗಿದೆ. ನನ್ನ ಮಗನ ಬಟ್ಟೆಗೆ ಬೆಂಕಿ ತಗಲಿ ಅವನನ್ನು ಆಸ್ಪತ್ರೆಗೆ ದಾಖಲಿಸಿದ್ದಾರಂತೆ..." ಎಂದು ಗಡಿಬಿಡಿಯಿಂದ ಹೋದರು. ಬೆಂಗಳೂರಿಗೆ ಮರಳಿದ ಮೇಲೆ ನಾವು ವಿಚಾರಿಸಿದಾಗ ಆತನ ಮೈಗೆ ಮೇಲಿಂದ ಮೇಲೆ ಸ್ವಲ್ಪ ಮಾತ್ರ ಬೆಂಕಿಯ ಉರಿ ಹತ್ತಿತ್ತು, ಅಪಾಯವೇನೂ ಇಲ್ಲ ಎಂದು ಅವರೇ ವೈದ್ಯರ ಅಭಿಪ್ರಾಯವನ್ನು ತಿಳಿಸಿದರು. ಮಗ ಸ್ವತಃ ಎಂಬಿಬಿಎಸ್ ಪರೀಕ್ಷೆಯನ್ನು ಆ ಹಿಂದೆ ಪಾಸು ಮಾಡಿದ್ದ ತರುಣ. ಜನವರಿ ಎರಡನೇ ವಾರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪದವಿ ಪ್ರದಾನ ಸಮರಂಭದಲ್ಲಿ ಡಿಗ್ರಿ ಪಡೆಯಬೇಕಿತ್ತು. ಆಸ್ಪತ್ರೆ ಅವನ ಮನೆಯಂತೆಯೇ ಇದ್ದುದರಿಂದ ಅಲ್ಲಿ ಉತ್ತಮ ವೈದ್ಯಕೀಯ ಚಿಕಿತ್ಸೆ ದೊರೆಯುತ್ತಿತ್ತು. ಬೇಗನೆ ಅವನು ಗುಣ ಹೊಂದುತ್ತಾನೆ ಎಂದು ನಾವೆಲ್ಲರೂ ತಿಳಿದಿದ್ದೆವು. ಆದರೆ ಪರಿಸ್ಥಿತಿ ತದ್ವಿಪರೀತವಾಗಿತ್ತು. ಸುಟ್ಟ ಗಾಯ ಹೊರಗಿನಿಂದ ತೀವ್ರವಾಗಿರಲಿಲ್ಲ, ನಿಜ. ಅದರ ಶಾಖ ಮಾತ್ರ ಒಳಗಿನ ಕೋಮಲ ಭಾಗಗಳಿಗೆ ಜಖಂ ಮಾಡಿರಬೇಕು. ದಿನೇ ದಿನೇ ಪರಿಸ್ಥಿತಿ ಉಲ್ಬಣಿಸುತ್ತ ಹೋಯಿತು. ಹಗಲೂ ಇರುಳೂ ದೊರೆಗಳು ಮಗನ ಜತೆಯಲ್ಲಿಯೇ ಇರಬೇಕಾದ ಸನ್ನಿವೇಶ. "ಯುದ್ಧರಂಗದಲ್ಲಿ ಗುಂಡುಗಳ ಮಳೆಯ ನಡುವೆ, ಜನ ಮಿಡತೆಗಳಂತೆ ಬೀಳುತ್ತಿದ್ದಾಗ ನಾನು ಬದುಕಿ ಬಂದದ್ದು ಈ ಪರಿಸ್ಥಿತಿ ನೋಡಲೆಂದೇ?" ಎಂದು ಉದ್ಗರಿಸಿದಾಗ, "ಜಪಾನೀ ಕೈದಿಯಾಗಿ ಹಲವು ವರ್ಷವಿದ್ದ ನಾನು, ಅವರ ಚಿತ್ರಹಿಂಸೆಗೊಳಗಾಗಿಯೂ ಖಾಯಿಲೆ ಕಸಾಲೆಗೆ ಸಿಕ್ಕಿಯೂ ಉಳಿದು ಬಂದುದು ಈ ದುಃಖ ಅನುಭವಿಸಲೆಂದೇ?" ಎಂದು ರೋದಿಸಿದಾಗ ಉತ್ತರ ಕೊಡಬಹುದಾದ ಶಕ್ತಿ (?) ಉತ್ತರವೀಯಲಿಲ್ಲ. ಉತ್ತರ ಕೊಡಲಾಗದ ನಾವು ದಿಗಂತವನ್ನು ನೋಡಿ ಬಿಸುಸುಯ್ದೆವು. ಅವರಾಗಿಯೇ ಒಂದು ದಿನ ಹೇಳಿದರು, "ಈ ಪರಿಸ್ಥಿತಿಯಲ್ಲಿ ನಾನು ಕುದುರೆಮುಖ ಶಿಬಿರಕ್ಕೆ ಬರುವಂತಿಲ್ಲ. ಅದರ ಕೊನೆಯ ಹಂತದ ಏರ್ಪಾಡನ್ನೂ ಮಾಡುವಂತಿಲ್ಲ. ನೀನೀ ವಿಶಿಷ್ಟ ಹೊಣೆಗಾರಿಕೆಯನ್ನೂ ಹೊತ್ತು ಮುಂದುವರಿಸಿಕೊಂಡು ಹೋಗಬೇಕು."
ನಾನೆಂದೆ, "ಈ ಶಿಬಿರವನ್ನು ನಡೆಸುವ ನಡೆಸದಿರುವ ಪ್ರಶ್ನೆ ನನಗೆ ಬರುವುದೇ ಇಲ್ಲ. ನಾವು ಒಂದು ಕೂಟವಾಗಿ ಸ್ವಸಂತೋಷದಿಂದ ಆಯ್ದುಕೊಂಡ ಸಾಹಸವಿದು. ಇದರಲ್ಲಿ ಮುಖ್ಯ ಸೂತ್ರಧಾರರಾದ ನೀವೇ ಬಂದು ನಮ್ಮೊಡನೆ ಇದ್ದು ನಮ್ಮ ಚಟುವಟಿಕೆಗಳಿಗೆ ಆಧಾರ, ಸ್ಥಿರತೆ ನೀಡದಿದ್ದರೆ ಅಂಥ ಶಿಬಿರ ಬರೀ ಯಾಂತ್ರಿಕ ಎನಿಸುತ್ತದೆ. ಯಾಂತ್ರಿಕತೆ, ಉತ್ಸಾಹಹೀನತೆ ಇಂಥ ಸ್ವಯಂಸ್ಫೂರ್ತ ಶಿಬಿರಗಳಲ್ಲಿ ಎಲ್ಲಿಯೂ ತಲೆದೋರಬಾರದು. ಮತ್ತೆ ನೀವಿಲ್ಲಿ ಈ ವಿಷಾದಮಯ ವಾತಾವರಣದಲ್ಲಿರುವಾಗ ನಾವು ಅಲ್ಲಿ ಹೇಗೆ ಸಂತೋಷದಿಂದಿರುವುದು? ಅಲ್ಲದೇ ನಿಮಗೆ, ನಿಮ್ಮ ಮಗನ ಚಿಂತೆಯೊಡನೆ ಕುದುರೆಮುಖಕ್ಕೆ ಹೋದ ೩೭ ಮಕ್ಕಳ ಚಿಂತೆಯೂ ಸೇರುವುದು. ದೂರವಿದ್ದಾಗ ಚಿಂತೆ ಹೆಚ್ಚಷ್ಟೆ. ಆದ್ದರಿಂದ ಈ ಶಿಬಿರವನ್ನು ಮುಂದೂಡೋಣ. ನಿಮ್ಮ ಕುಮಾರ ಅಪಾಯದಿಂದ ಪಾರಾದ ಮೇಲೆ ಸಂತೋಷದಿಂದ ನಡೆಸೋಣ."

ನಮ್ಮನ್ನು ಹಿಂದೆ ಸಾವನದುರ್ಗಕ್ಕೆ ಕಳಿಸಿದ ಇವರು, ಖುದ್ದು ನಾನೇ ಹುಡುಗರ ಜತೆಯಲ್ಲಿ ಹೋಗಿದ್ದರೂ ನಾವು ಮರಳುವತನಕ ಆಹಾರ, ವಿಶ್ರಾಂತಿ ಸರಿಯಾಗಿ ಪಡೆಯದೇ ಅಸಹಾಯಕರಾಗಿ ಉದ್ವಿಗ್ನತೆಯಿಂದ ಚಡಪಡಿಸುತ್ತಿದ್ದರಂತೆ. ಆ ಕಡೆಯಿಂದ ಬರುವ ಪ್ರತಿ ಬಸ್ಸನ್ನೂ ತಡೆದು ನಮ್ಮ ವಿಚಾರ ಪ್ರಶ್ನಿಸುತ್ತಿದ್ದರಂತೆ. ನಾವು ಮರಳುವಾಗ ರಾತ್ರಿ ೧೧ ಗಂಟೆಯಾಗಿತ್ತು. ರಾತ್ರಿ ಏರಿದಂತೆ ಅವರ ಉದ್ವಿಗ್ನತೆ ಏರಿತಂತೆ. ನಾವು ಹಿಂತಿರುಗಿದ ಮೇಲೆಯೇ ಅವರು ಶಾಂತರಾದರು. ಕ್ಯಾಂಪಿನ ಪ್ರತಿ ಮಗುವೂ ತನ್ನ ಮಗುವೆಂದೇ ತನ್ನ ರಕ್ಷಣೆಯಲ್ಲಿ ಇರುವ ಪವಿತ್ರ ನಿಧಿಯೆಂದೇ ಅವರ ವಿಶ್ವಾಸಪೂರ್ವಕ ನಂಬಿಕೆ. ಅದೇ ರೀತಿಯ ವರ್ತನೆ. ಇಂಥವರು ನಮ್ಮನ್ನು ೨೦೦ ಮೈಲು ದೂರದ ಕುದುರೆಮುಖದ ಅಜ್ಞಾತ ಔನ್ನತ್ಯದ ಅಪಾಯದೆಡೆಗೆ ಕಳಿಸಿ ಇಲ್ಲಿ ಸುಮ್ಮನೆ ಕುಳಿತಾರೇ?

ಅವರು ಒಪ್ಪಲಿಲ್ಲ, "ನಾವು ನಿಶ್ಚೈಸಿದ ತಾರೀಕಿಗೆ ಹೊರಡಲೇಬೇಕು. ಮಗನ ಅಂದಿನ ಪರಿಸ್ಥಿತಿ ನೋಡಿ ನಿಮ್ಮ ಜೊತೆಯಲ್ಲಿ ಅಲ್ಲಿಯವರೆಗೆ ಬಂದು ಒಂದೆರಡು ದಿನವಿದ್ದು ಹಿಂತಿರುಗುತ್ತೇನೆ. ಇಲ್ಲ, ಶಿಬಿರ ನಡೆಯುತ್ತಿರುವಾಗ ನಡುವೆ ಬಂದು ಸೇರಿಕೊಳ್ಳುತ್ತೇನೆ. ಬೆಟಾಲಿಯನ್ ಕೈಗೊಂಡ ನಿರ್ಧಾರ ನನ್ನೊಬ್ಬನ ಹಿತಾಸಕ್ತಿಗಳನ್ನು ಅನುಸರಿಸಿ ಬದಲಾಗಬಾರದು."

ಅವರ ಮಗನ ಪರಿಸ್ಥಿತಿ ಅತಿ ಚಿಂತಾಜನಕವಾಗಿತ್ತು. ನನಗಾಗಲೀ ನಮ್ಮ ಹುಡುಗರಿಗಾಗಲೀ ಯಾರಿಗೂ ಉತ್ಸಾಹವಿರಲಿಲ್ಲ.

"ಬೆಟಾಲಿಯನ್ ಕಮಾಂಡರನ್ನು ಬಿಟ್ಟು ಬೆಟಾಲಿಯನ್ ಇಲ್ಲ. ಈ ಸಂದರ್ಭದಲ್ಲಿ ನಾನು ಗುರುತರ ಹೊಣೆ ಹೊರಲಾರೆ. ಆದ್ದರಿಂದ ಶಿಬಿರವನ್ನು ಮುಂದೂಡುವುದೊಂದೇ ಮಾರ್ಗ" ಎಂದು ನಾನು ಹಠ ಹಿಡಿದೆ. ಅವರು ಏನೂ ಅನ್ನಲಿಲ್ಲ. ಹುಡುಗರನ್ನು ಪ್ರತ್ಯೇಕವಾಗಿ ಭೇಟಿಯಾಗಿ ಸಂಗತಿ ವಿವರಿಸಿದೆ. ಅವರಿಗೆಲ್ಲ ಹತಾಶೆ ಆಯಿತು, ನಿಜ. ಆದರೆ ನನ್ನ ನಿರ್ಧಾರವನ್ನು ಅವರು ಪೂರ್ತಿಯಾಗಿ ಅನುಮೋದಿಸಿದರು.

ಕುಮಾರ ಉಳಿಯಲಿಲ್ಲ. ಶಿಬಿರ ಮುಂಡೂಡುವ ನಿರ್ಧಾರ ಕೈಗೊಂಡೊಡನೆ (ಜನವರಿ ೧೦) ನಾವು ಡಾರ್ಜಿಲಿಂಗಿಗೆ ತಂತಿ ಕಳಿಸಿದೆವು. ಶೆರ್ಪಾ ಶಿಕ್ಷಕ ಬರುವುದು ಬೇಡವೆಂದು. ಆದರೆ ಅಷ್ಟರಲ್ಲಿಯೇ ಅಲ್ಲಿಂದ ಒಬ್ಬನಲ್ಲ, ಉತ್ಸಾಹೀ ತರುಣರಿಬ್ಬರು ಹೊರಟು ಬಿಟ್ಟಿದ್ದರು. ಆ ದುರ್ದಿನದ ಬೆಳಗ್ಗೆ (ಜನವರಿ ೧೫) ಅವರೂ ಬಂದಿಳಿಯಬೇಕೇ. ದೈವದ ಕ್ರೂರ ಪ್ರಹಾರವೆಂದರೆ ಇದೇ. ಅವರ ಖರ್ಚು ವೆಚ್ಚವಿತ್ತು ದುಃಖದಿಂದ ಹಿಂದೆ ಕಳಿಸಿದೆವು. ಬೇರಾವ ಮಾರ್ಗವೂ ಇರಲಿಲ್ಲ.

# ತೊರೆ ಹರಿಯಿತು

## ಅಧ್ಯಾಯ ಹತ್ತು

ಜನವರಿ ಕೊನೆಯ ವಾರದಲ್ಲಿ ದೊರೆಗಳು ಆಫೀಸಿಗೆ ಬಂದರು. ಈಗ ಅವರಲ್ಲಿ ಮೊದಲಿನ ಗೆಲುವಿಲ್ಲ. ದೃಷ್ಟಿ ಅಂತರ್ಮುಖಿಯಾಗಿದೆ. ಕರ್ತವ್ಯ ನಿರ್ವಹಣೆಯೊಂದೇ ಜೀವನದ ಪರಮಪದವಿ ಪಡೆಯುವ ದಾರಿ ಎಂದು ತಿಳಿದು ಅನುಷ್ಠಾನಕ್ಕೆ ತಂದವರಿವರು. ಕಚೇರಿಯ ಫೈಲುಗಳನ್ನೂ ಹಳೆಯ ಕಾಗದ ಪತ್ರಗಳನ್ನೂ ಓದುತ್ತಿದ್ದರು. ಫೋನಿಗೆ ಉತ್ತರ ಕೊಡುತ್ತಿದ್ದರು. ನಾನು ಸುಮ್ಮನೆ ಅವರೆದುರು ಕುಳಿತಿದ್ದೆ. ಏನನ್ನು ಹೇಗೆ ಮಾತಾಡಲಿ? ಅವರೇ ತೊಡಗಿದರು, "ಹಾಗಾದರೆ ಇನ್ನು ಮುಂದಿನ ದಾರಿ ಏನೆಂದು ಯೋಚನೆ ಮಾಡಿದ್ದೀಯೆ?"
"ಈಗಿನ ಸನ್ನಿವೇಶದಲ್ಲಿ..."
"ಸನ್ನಿವೇಶ ಮುಗಿಯಿತಲ್ಲ, ಯೂನಿವರ್ಸಿಟಿಗೆ, ಹುಡುಗರಿಗೆ ಕೊಟ್ಟ ಮಾತು ನಾವು ಉಳಿದವರು ಪೂರೈಸಲೇಬೇಕಷ್ಟೆ."
"ಆದರೆ ನೀವೀಗ ನಿಮ್ಮ ಮನೆ ಮಠ ಬಿಟ್ಟು ಅಷ್ಟು ದೂರ ಬರುವುದು ಸಾಧ್ಯವೇ, ಸರಿಯೇ? ಆರೋಗ್ಯ ಸರಿಯಾಗಿ ಉಳಿದೀತೇ?"
"ಸ್ವಲ್ಪ ಹೊರಗೆ ಹೋಗಿ ಬರುವುದೇ ಹಿತಕರ. ಹುಡುಗರ ಸಹವಾಸ ಈಗ ಮನಸ್ಸಿಗೆ ಅಗತ್ಯವಾದ ಟಾನಿಕ್." ಕ್ಯಾಲೆಂಡರ್ ನೋಡಿ, ತಿರುವಿ ಫೆಬ್ರುವರಿ ೧೧ರಿಂದ ೨೦ರ ತನಕ ಶಿಬಿರ ನಡೆಸುವುದೆಂದು ನಿಶ್ಚೈಸಿದೆವು. ಮತ್ತೆ ಪುನಃ ಬೇರೆ ಬೇರೆ ಇಲಾಖೆಗಳಿಗೆ ಪತ್ರ ಬರೆದೆವು. ಶೆರ್ಪಾಗಳಿಗೆ ಮಾತ್ರ ಬರೆಯಲಿಲ್ಲ.

# ಕಾಗದದ ಕುದುರೆಮುಖ

### ಅಧ್ಯಾಯ ಹನ್ನೊಂದು

ಮುಂದಿದ್ದ ಅವಧಿ ೧೨ ದಿವಸ ಮಾತ್ರ. ಆಗಬೇಕಾಗಿದ್ದ ಕೆಲಸ ಅಗಾಧವಾಗಿತ್ತು. ಆಹಾರ ಸಾಮಗ್ರಿಗಳ ಶೇಖರಣೆ; ಡೇರೆ ಮತ್ತು ಶಿಕ್ಷಣ ಸಾಮಗ್ರಿಗಳ ಕ್ರಮಬದ್ಧ ಜೋಡಣೆ; ಎರಡು ಮಿಲಿಟರಿ ಲಾರಿಗಳನ್ನು ಓಡಿಸಲು ಮಿಲಿಟರಿ ಅಧಿಕಾರಿಗಳಿಂದ ಅನುಮತಿ; ಅಡುಗೆಯವರ ಏರ್ಪಾಡು; ಹುಡುಗರಿಗೆ ಪೋಷಾಕು, ಸರಂಜಾಮು ಕೊಟ್ಟು ಅವರನ್ನು ಸಿದ್ಧಪಡಿಸುವುದು. ಇವುಗಳಲ್ಲಿ ಯಾವುದೇ ಒಂದು ಸರಿಯಾಗಿ ಆಗದಿದ್ದರೂ ಶಿಬಿರ ನಡೆಯುವಂತಿಲ್ಲ.

ನಮ್ಮ ಬೆಟಾಲಿಯನ್ನಿನ ಬೆನ್ನೆಲುಬು, ಎಲ್ಲಿಯೂ ಎಂದೂ ಪ್ರತ್ಯೇಕವಾಗಿ ಪ್ರಕಾಶಕ್ಕೆ ಬರದೇ, ಆದರೆ ಎಲ್ಲೆಲ್ಲಿಯೂ ತಮ್ಮ ದಕ್ಷತೆಯ ಕುರುಹನ್ನು ಬೀರುವ ಅಡ್ಮಿನಿಸ್ಟ್ರೇಟಿವ್ ಆಫೀಸರ್ ಕ್ಯಾಪ್ಟನ್ ಎಚ್.ಎನ್. ಅಶ್ವತ್ಥನಾರಾಯಣ. ಒಂದು ಸಾವಿರದಷ್ಟು ದೊಡ್ಡ ಕ್ಯಾಂಪೂ ಅಶ್ವತ್ಥರಿಗೆ ಲೀಲಾಜಾಲ. ಆಹಾರ ಮತ್ತು ಇತರ ಏರ್ಪಾಡುಗಳು ಸಂಪೂರ್ಣವಾಗಿ ಅವರವೇ. ೧೨ನೇ ಮೈಸೂರಿನ ಕ್ಯಾಂಪ್ ಎಂದರೆ ಅಶ್ವತ್ಥರ ಕ್ಯಾಂಪು. ಅದಕ್ಕೆ ಬರಲು ಬೇರೆ ಬೆಟಾಲಿಯನ್ನಿನ ಹುಡುಗರಿಗೂ ತವಕ. ಅಷ್ಟು ಪುಷ್ಕಳ ಮತ್ತು ಸಮೃದ್ಧ ಆಹಾರವನ್ನಿವರು ಒದಗಿಸುವರು. ನಿಜವಾದ ಕ್ಯಾಂಪು ನಡೆಸಿ ಮುಗಿಯುವಾಗಲೇ ಅದರ ಲೆಕ್ಕಪತ್ರಗಳ ಪರಿಶೋಧನೆಯೂ (audit) ಆಗಬೇಕು. ಯುದ್ಧರಂಗದ ವೀರಾಧಿವೀರರು ಈ ಪರಿಶೋಧನೆಯ ಕಾಗದದ ಯುದ್ಧದಲ್ಲಿ ಬಸವಳಿದು, "ಕ್ಯಾಂಪು ಆಡಿಟ್ಟಿಗಾಗಿಯೋ ಆಡಿಟ್ ಕ್ಯಾಂಪಿಗಾಗಿಯೋ?" ಎಂದು ಕೇಳುವ ಪರಿಸ್ಥಿತಿ ಹೆಚ್ಚು. ಅಶ್ವತ್ಥರಿಗೆ ಇಲ್ಲಿಯೂ ತೊಂದರೆ ಇಲ್ಲ. ಇವರ ಕೆಲಸ ಕಾರ್ಯ ಅಷ್ಟೊಂದು

ಕ್ರಮಬದ್ಧವಾದುದರಿಂದ ಎಡಗಾಲಾದ ಮೇಲೆ ಬಲಗಾಲು ಮುಂದಕ್ಕೆ ತಂತಾನೇ ಹೋಗುವಂತೆ ನಿಜ ಕ್ಯಾಂಪೂ ಪೇಪರ್ ಕ್ಯಾಂಪೂ ಎರಡೂ ಇವರಿಗೆ ಸಮಾನ ಸುಲಭವೇ.

ಅಶ್ವತ್ಥರಿಗೆ ಬೆಟಾಲಿಯನ್ ಕೆಲಸ ಉಸಿರು ಕಟ್ಟಿಸುವಷ್ಟು ಇದ್ದುದರಿಂದ ಕುದುರೆಮುಖದ ವಿಚಾರದಲ್ಲಿ ತೊಂದರೆ ಇದುವರೆಗೆ ಕೊಟ್ಟಿರಲಿಲ್ಲ. ಈಗ ಆಹಾರದ ವ್ಯವಸ್ಥೆ ಮಾಡಲು ಇವರೇ ಸರಿಯೆಂದು ಇದನ್ನೂ ಅಡುಗೆಯವರನ್ನು ದೊರಕಿಸಿಕೊಡುವ ಹೊಣೆಯನ್ನೂ ಇವರಿಗೆ ವಹಿಸಲಾಯಿತು. "ಮಾಡೋಣ" ಎಂಬ ಹಸನ್ಮುಖ ವಾಣಿ ಮಾತ್ರ ಇವರಿಂದ ಬಂದ ಉತ್ತರ. ಲಾರಿಯ ಏರ್ಪಾಡನ್ನು ಒಂದೂರಿಂದ ಇನ್ನೊಂದೂರಿಗೆ ಹೊರಡಿಸುವ ಮುನ್ನ ಲಾರಿ ಭಾರದ ಪತ್ರ ವ್ಯವಹಾರ ನಡೆಸಿರಬೇಕು. ಉಳಿದಿದ್ದ ೧೦–೧೨ ದಿವಸಗಳಲ್ಲಿ ಪತ್ರಗಳೊಡನೆ ದೊರೆಗಳೇ ನಡೆಯದಿದ್ದರೆ ಅನುಮತಿ ಸಕಾಲದಲ್ಲಿ ದೊರೆಯಲಾರದು. ಒಂದು ವಾರವಿರುವಾಗಲೇ ಎರಡು ಲಾರಿಗಳ ಚಾಲನೆಗೂ ಅನುಮತಿ ದೊರೆಯಿತು. ಒಂದು ಲಾರಿ ನಮ್ಮ ಬೆಟಾಲಿಯನ್ನಿನದೇ; ಇನ್ನೊಂದು ಬೇರೆ ಒಂದು ಬೆಟಾಲಿಯನ್ನಿನದು. ಉಳಿದ ಸಮಸ್ಯೆಗಳ ಪರಿಹಾರ ನನ್ನ ಮಟ್ಟದಲ್ಲಿ ಪಡೆಯಲು ಸಾಧ್ಯವಿತ್ತು. ಹೀಗೆ ನಾವು ಮೂರು ದಾರಿಗಳ ಮೂಲಕ ಕುದುರೆಮುಖದ ಶಿಖರದೆಡೆಗೇರುವ ಪ್ರಯತ್ನದಲ್ಲಿ ನಿತ್ಯ ನಿರತರಾಗಿದ್ದೆವು.

ಈ ಮಧ್ಯೆ ದೈವ (?) ಎರಡನೇ ಪರೀಕ್ಷೆಯನ್ನು ದೊರೆಗಳ ಮುಂದೆ ಒಡ್ಡಿತು. ಅವರ ತೊಂಬತ್ತರ ಸಮೀಪದ ಆರಡಿ ಮೂರಿಂಚು ಎತ್ತರದ ಭೀಮಸದೃಶ ತಂದೆ, ಮೊಮ್ಮಗನ ಅಕಾಲ ನಿಧನದಿಂದ ಬಲುಗಾಸಿಗೊಂಡ ಹಿರಿಯ ಚೇತನ, ಒಂದು ದಿವಸ ಕುರ್ಚಿಯಲ್ಲಿ ಕುಳಿತಿದ್ದಂತೆಯೇ ತಲೆತಿರುಗಿ ಕೆಳಗೆ ಬಿದ್ದರು. ಆಗ ಅವರ ಕಾಲಿನ ಮೂಳೆ ಮುರಿಯಿತು. ಮನಸ್ಸು, ದೇಹಗಳ ನೋವು, ಪ್ರಾಯ ೯೦. ಇನ್ನು ಮೂಳೆ ಕೂಡುವುದು ಉಂಟೇ? ಆದರೂ ಪ್ರಯತ್ನ ಮಾಡಲೇಬೇಕು. ನೋವಾದರೂ ಉಪಶಮನವಾದೀತು. ಪುನಃ ಆಸ್ಪತ್ರೆಯ ಯಾತ್ರೆ ದೊರೆಗಳಿಗೆ ಪ್ರಾಪ್ತಿಯಾಯಿತು. ಪ್ರಾಣಾಪಾಯವಿದ್ದಂತೆ ತೋರಲಿಲ್ಲ. ಆದರೆ ೯೦ರ ಪಕ್ವ ಪರಿಸ್ಥಿತಿಯಲ್ಲಿ ಏನೂ ಆಗಬಹುದು.

"ಈ ಸಲ ಏನೇ ಆದರೂ ಕ್ಯಾಂಪು ನಡೆದೇ ತೀರಬೇಕು" ಎಂದು ಅವರಾಗಿಯೇ ನನಗೆ ಹೇಳಿದರು. ಮನೆಯಲ್ಲಿ ವೃದ್ಧೆ ತಾಯಿ, ಆಸ್ಪತ್ರೆಯಲ್ಲಿ ಜಖಂಗೊಂಡ ತಂದೆ, ಮಧ್ಯೆ ಎಡೆತಡೆಯಿರದ ಹೊಣೆಗಾರಿಕೆಗಳ ಪರಂಪರೆ. ಅವರ ಧೀರೋದಾತ್ತ ವ್ಯಕ್ತಿತ್ವ ಇವುಗಳಿಗೆಲ್ಲ ಸಮತೂಕವಾಗಿ ಎದ್ದು ನಿಂತು ಕರ್ತವ್ಯ ನಿರ್ವಹಿಸಿತು.

ನಮ್ಮ ಲಾರಿಯೇನೋ ಸರಿಯಾಗಿತ್ತು. ಬೇರೆ ಬೆಟಾಲಿಯನ್ನಿನ ಲಾರಿ ಮಿಲಿಟರಿ ವರ್ಕ್‌ಷಾಪಿಗೆ ಆ ಮೊದಲೇ ರಿಪೇರಿಗಾಗಿ ಹೋಗಿತ್ತು. ಎರಡು ಮೂರು ದಿವಸಗಳಲ್ಲಿ ಎಲ್ಲ ಸರಿಯಾಗುವುದೆಂದು ಕಾರ್ಯಾಗಾರದವರು ಆಶ್ವಾಸನೆಯಿತ್ತಿದ್ದರು. ಆದರೂ ದೊರೆಗಳು ಪ್ರತಿದಿನ ತಂದೆಯವರೊಡನೆ ಕಳೆದಷ್ಟೇ ಹೊತ್ತು ಮಿಲಿಟರಿ ಕಾರ್ಯಾಗಾರದಲ್ಲಿಯೂ ಕಳೆಯುತ್ತಿದ್ದರು. ರಿಪೇರಿಯ ಪ್ರಗತಿ ಏನೂ ಸಾಲದು, ಲಾರಿಯಲ್ಲಿರುವ ನ್ಯೂನತೆಗಳು ಹಲವಾರು ಎಂದೇ ಪ್ರತಿ ದಿನದ ವರದಿ. ನಾವು ೧೧ರ ಬೆಳಗ್ಗೆ ಹೊರಟು ಇಡೀ ದಿವಸ ಲಾರಿ ಪ್ರಯಾಣದಲ್ಲಿ ವ್ಯರ್ಥ ಮಾಡುವುದಕ್ಕಿಂತ ೧೦ರ ಸಾಯಂಕಾಲವೇ ಹೊರಟು ಹೋಗುವುದು. ಮಧ್ಯರಾತ್ರಿಯ ತನಕವೂ ಚಾಲನೆ ಮಾಡಿ ಬೇಲೂರು ಸೇರಿ ಅಲ್ಲಿ ತಂಗುವುದು ಎಂದು ನಿರ್ಧರಿಸಿದೆವು. ರಾತ್ರಿ ಪ್ರಯಾಣ ಲಾರಿ ಎಂಜಿನ್ನುಗಳಿಗೂ ಒಳ್ಳೆಯದು, ದಾರಿಯಲ್ಲಿ ಬೇಲೂರನ್ನೂ ನೋಡಿದ ಹಾಗೆ ಆಯಿತು. ಇದು ನಮ್ಮ ಯೋಜನೆ.

ದಿನ ಉರುಳಿದಂತೆ ಒಂದು ಕಡೆ ದೊರೆಗಳ ತಂದೆಯವರ ಆರೋಗ್ಯ ಗಾಬರಿ ಹುಟ್ಟಿಸುವಂಥ ಸ್ಥಿತಿಗೆ ಮುಟ್ಟಿತು. ಇನ್ನೊಂದು ಕಡೆ ವರ್ಕ್‌ಷಾಪಿನಲ್ಲಿದ್ದ ಲಾರಿ ಇನ್ನೂ ಓಡುವ ಸ್ಥಿತಿಗೆ ಬಂದಿರಲಿಲ್ಲ – ದ್ವಿವಿಧ ಪರೀಕ್ಷೆ.

೧೦ನೆಯ ತಾರೀಕು ಬಂದೇಬಿಟ್ಟಿತು. ಸಾಯಂಕಾಲ ಬೀಳ್ಕೊಡುವ ಮೀಟಿಂಗಿನ ಸಿದ್ಧತೆ ಮುಗಿದಿದೆ. ಆಹಾರ, ಸಾಮಾನು, ಸರಂಜಾಮು ಎಲ್ಲವೂ ಕ್ರಮಬದ್ಧವಾಗಿ ಲಾರಿಗೆ ಹಾರಲು ತಯಾರಾಗಿವೆ. ಒಂದು ಲಾರಿಯನ್ನು ಲೋಡ್ ಮಾಡಿಯಾಯಿತು. ಹುಡುಗರೆಲ್ಲರೂ ಉತ್ಸಾಹದಿಂದ ಬಂದು ಕಾಲೇಜಿನಲ್ಲಿ ಜಮಾಯಿಸುತ್ತಿದ್ದಾರೆ. ನವಹರ್ಷ ಅನುಭವಿಸುವ ಕುತೂಹಲ ಅವರ ಮುಖಗಳ ಮೇಲೆ ನಲಿದಾಡುತ್ತಿದೆ. ಬೆಟಾಲಿಯನ್ ಆಫೀಸಿಗೆ ಫೋನ್ ಮಾಡಿದಾಗ ದೊರೆಗಳಿರಲಿಲ್ಲ. ಅಶ್ವತ್ಥರೆಂದರು, "ಲಾರಿಯಿನ್ನೂ ಹೊರಗೆ ಬರುವ ಲಕ್ಷಣವಿಲ್ಲ. ಅವರ ತಂದೆಯವರ ಸ್ಥಿತಿ ಭಯಂಕರವಾಗಿದೆ. ಜೊತೆಗೆ ದೊರೆಗಳನ್ನು ಬಳ್ಳಾರಿಗೆ ವರ್ಗಾಯಿಸುವ ಆರ್ಡರೂ ಬಂದಿದೆ. ನಿಮ್ಮ ಕ್ಯಾಂಪಿನ ಕೊನೆಯ ದಿವಸ ಅವರು ಹೊಸಬರಿಗೆ ಹೊಣೆ ವಹಿಸಿಕೊಡಬೇಕು. ಆದ್ದರಿಂದ ಅವರು ಹೇಗೆ ಬರುತ್ತಾರೋ ನಾ ಕಾಣೆ. ಈ ಆಡಳಿತೆಯ ಬದಲಾವಣೆಯ ಸಂದರ್ಭದಲ್ಲಿ ನಾನೂ ಹೊರಡುವಂತಿಲ್ಲ."
ಹರ್ಷಸೌಧಕ್ಕೆ ಕಳಶ ಇಡುವಂಥ ಸುದ್ದಿ! ಒಂದೇ ಎರಡೇ? ಅವುಗಳ ಪರಂಪರೆಯೇ.

ಸಭೆ ೪ ಗಂಟೆ ಸಾಯಂಕಾಲಕ್ಕೆ ಸೇರಬೇಕು. ಅಪರಾಹ್ಣ ೨ ಗಂಟೆ ತನಕವೂ ಹೊಸ ಸುದ್ದಿ ಏನೂ ಬರಲಿಲ್ಲ. ಏನೇ ಆಗಲಿ ಒಂದು ಲಾರಿಯಲ್ಲಿ ಸಾಮಾನೆಲ್ಲ ಹೇರಿ ಆಗುವಷ್ಟು ಹುಡುಗರನ್ನು ಕರೆದುಕೊಂಡು ಹೊರಟೇ ಬಿಡುವುದು. ಉಳಿದವರು ಮರುದಿವಸ ಬೆಳಗ್ಗೆ

ಬಸ್‌ನಲ್ಲಿ ಹೊರಟು ಬೆಳ್ತಂಗಡಿಗೆ ಸಂಜೆ ತಲಪಬೇಕು. ಬೇರಾವ ಮಾರ್ಗವೂ ಇಲ್ಲ ಎಂದು ನಿಶ್ಚೈಸಿದ್ದೆ. ಇಷ್ಟಾಗುವಾಗ ಕಾಲೇಜಿನ ಹಿಂದುಗಡೆ ಗೇಟಿನಿಂದ ದೊರೆಗಳು ಹರ್ಷವದನರಾಗಿ ಮೇಲೆ ಬರುವುದನ್ನು ಕಂಡೆ.

"ಪರೀಕ್ಷೆಯಲ್ಲಿ ಗೆದ್ದಂತಾಯಿತು" ಎಂದರು. ಮುಂದುವರಿಯುತ್ತ, "ಮೊದಲು ವರ್ಕ್‌ಷಾಪ್ ನೋಡಿದೆ. ಲಾರಿ ಇನ್ನೊಂದು ವಾರದ ಮೇಲಾದರೂ ಹೊರಡುವುದೋ ಇಲ್ಲವೋ ಸಂದೇಹ. ಅಲ್ಲಿಂದ ಸೀದಾ ಗ್ರೂಪ್ ಕಮಾಂಡರರ ಹತ್ತಿರ ಹೋದೆ. ಪರಿಸ್ಥಿತಿ ವಿವರಿಸಿದೆ. ಅವರ ಹತೋಟಿಯಲ್ಲಿರುವ ಬೇರಾವುದಾದರೂ ಬೆಟಾಲಿಯನ್ ಲಾರಿ ಕೊಡಿಸಲು ವಿನಂತಿಸಿದೆ. ಅವರ ಅನುಮತಿಯಿಂದ ನನ್ನ ಹಳೆಯ ಮಿತ್ರ, ಸಹೋದ್ಯೋಗಿ ಈಗ ಒಂದನೇ ಮೈಸೂರಿನ ಓಸಿ ಮೇಜರ್ ಎಂ.ಎಸ್. ಖಾನ್‌ರಿಗೆ ಫೋನ್ ಮಾಡಿದೆ: 'ಖಾನ್! ನಾನು ತೊಂದರೆಯಲ್ಲಿದ್ದೇನೆ. ೧೨ ದಿವಸಗಳವರೆಗೆ ಈಗಿಂದೀಗಲೇ ಕುದುರೆಮುಖಕ್ಕೆ ಹೋಗಿ ಬರಲು ನಿಮ್ಮ ಲಾರಿ ಬೇಕು' ಎಂದೆ. 'ಕಳಿಸಿಕೊಡುತ್ತೇನೆ' ಒಂದೇ ಉತ್ತರ ಅವರದು. ನಾನವರ ಆಫೀಸಿಗೆ ಹೋಗುವಷ್ಟರಲ್ಲಿಯೇ ಅವರು ಡ್ರೈವರ್ ಲಾರಿ ಎಲ್ಲವನ್ನೂ ಸಿದ್ಧಪಡಿಸಿ ಹೊರಡಿಸಿ ಬಿಟ್ಟಿದ್ದರು. ಲಾರಿ ಡ್ರೈವರ್ ರಜೆಯಲ್ಲಿದ್ದುದರಿಂದ ಕಾರ್ ಡ್ರೈವರ್ ಲಿಂಗೋಜಿಯನ್ನು ಈ ಲಾರಿಯಲ್ಲಿ ಕಳಿಸಿದ್ದಾರೆ. ಈ ಲಿಂಗೋಜಿಯೂ ನನ್ನ ಹಳೆಯ ಅನುಯಾಯಿ."

ಕಾಲೇಜಿನ ಹಿಂದೆ ಅನ್ಸಾರಿ (ನಮ್ಮ ಡ್ರೈವರ್) ಲಾರಿಯೂ ಲಿಂಗೋಜಿ ಲಾರಿಯೂ ಭರದಿಂದ ಹೇರಲ್ಪಟ್ಟವು. ಸಭೆ ಪ್ರಾರಂಭವಾಗುವ ಮೊದಲು ದೊರೆಗಳು ಇನ್ನೊಂದು ಮಾತು ಹೇಳಿದರು, "ನಾನು ನಿಮ್ಮೊಡನೆ ಬರುತ್ತೇನೆ. ಅಲ್ಲಿ ಒಂದೆರಡು ದಿನವಿದ್ದು ಹಿಂತಿರುಗುತ್ತೇನೆ. ಈ ದಿವಸ ಬೆಳಗ್ಗೆ ನನ್ನ ತಂದೆಯವರನ್ನೇ ಕೇಳಿಬಿಟ್ಟೆ: 'ಎರಡೂ ಕರ್ತವ್ಯಗಳೇ, ಎರಡೂ ಅತಿಮುಖ್ಯವಾದವೇ, ಯಾವುದನ್ನು ನಿರ್ವಹಿಸಲಿ, ಯಾವುದನ್ನು ನಿರ್ವಹಿಸದಿರಲಿ' ಎಂದು. ಅವರು ಸ್ಪಷ್ಟವಾಗಿ ಹೇಳಿದರು, 'ನೀನು ಹೋಗು, ಕ್ಯಾಂಪನ್ನು ಪೂರ್ಣವಾಗಿ ಸರಿಯಾಗಿ ನಡೆಸು. ನೀನು ಹಿಂತಿರುಗಿ ಬರುವವರೆಗೂ ನನಗೇನೂ ಆಗುವುದಿಲ್ಲ' ಎಂದು. ಈಗ ನಾನು ಲಘುವಾಗಿದ್ದೇನೆ."
ಒಳ್ಳೆಯ ಕೆಲಸಕ್ಕೆ ನೂರೆಂಟು ವಿಘ್ನಗಳು. ಅವನ್ನು ಯಶಸ್ವಿಯಾಗಿ ಎದುರಿಸಿದರೆ ನೂರೊಂಬತ್ತನೆಯದು ಜಯ.

ಮೀಟಿಂಗಿನಲ್ಲಿ ಪ್ರಿನ್ಸಿಪಾಲ್ ಆರ್. ಆರ್, ಉಮರ್ಜಿಯವರು ಮತ್ತು ಸಹೋದ್ಯೋಗಿಗಳು ಸಾಹಸಪ್ರಿಯರಿಗೆ ಶುಭ ಕೋರಿದರು. ಕಾಲೇಜಿಗೆ, ಬೆಟಾಲಿಯನ್ನಿಗೆ, ಯೂನಿವರ್ಸಿಟಿಗೆ ಜಯ ಜಯಕಾರ ಘೋಷಿಸಿ ಅದು ಅಂತ್ಯವಾಯಿತು.

# ಕುದುರೆಮುಖದ ರಾವುತರು

### ಅಧ್ಯಾಯ ಹನ್ನೆರಡು

೩೭ ಕ್ಯಾಡೆಟ್ಟುಗಳು, ಇಬ್ಬರು ಅಡುಗೆಯವರು, ಇಬ್ಬರು ಡ್ರೈವರ್, ಒಬ್ಬ ಸೇವಕ, ಸುಬೇದಾರ್ ಖಾನ್ವಿಲ್ಕರ್ ಸೇರಿದಂತೆ ನಾಲ್ಕು ಮಂದಿ ಮಿಲಿಟರಿ ಶಿಕ್ಷಕರು, ನಾಲ್ವರು ಎನ್‌ಸಿಸಿ ಆಫೀಸರುಗಳು (ನಿಸಾರ್ ಅಹಮದ್, ಕೆಂಡಗಣ್ಣ ಸ್ವಾಮಿ, ಶಿವಪ್ಪ ಮತ್ತು ನಾನು) ಮತ್ತು ಮುಖ್ಯ ನಾಯಕರು ಮೇಜರ್ ನಾರಾಯಣ ಸಿಂಗ್ (ದೊರೆಗಳು) – ಹೀಗೆ ೫೧ ಜನರ ತಂಡ ಸ್ವಯಂ ಪೂರ್ಣವಾಗಿ ಎರಡು ಲಾರಿಗಳಲ್ಲಿ ವಿಂಗಡಿಸಲ್ಪಟ್ಟು ಕುದುರೆಮುಖದೆಡೆಗೆ ಹೊರಟಿತು. ಅಶ್ವತ್ಥರು ಎಲ್ಲವನ್ನೂ ಅತ್ಯುತ್ತಮವಾಗಿ ಒದಗಿಸಿಕೊಟ್ಟ ಕರ್ತವ್ಯಧೀರರು. "ಸಾಧ್ಯವಾದರೆ ಒಂದು ದಿನದ ಮಟ್ಟಿಗಾದರೂ ನಡುವೆ ಬರುತ್ತೇನೆ" ಎಂದು ನಮ್ಮನ್ನು ಬೀಳ್ಕೊಟ್ಟರು. ಶಿಲ್ಪಿ ದೇವಾಲಯ ನಿರ್ಮಿಸುತ್ತಾನೆ. ಆದರೆ ಪ್ರವೇಶೋತ್ಸವ ಮಾಡುವವರು ಬೇರೆ. ದುಡಿಮೆ ಯಶಸ್ವಿಯಾಗಿ ಪೂರೈಸಿದುದೇ ಆತನ ಪ್ರತಿಫಲ, ಸಂತೃಪ್ತಿ.

ನಮ್ಮ ತಂಡದ ಪ್ರಮುಖ ಸದಸ್ಯರನ್ನು ಕುರಿತು ನಾಲ್ಕು ಮಾತು ಹೇಳುವುದು ಅಗತ್ಯ.
ನಿಸಾರ್ ಅಹಮದ್ ಅವರನ್ನು ಕನ್ನಡ ಜನ ಶ್ರೇಷ್ಠ ಆಧುನಿಕ ಕವಿ, 'ಕುರಿಗಳು ಸಾರ್, ನಾವು ಕುರಿಗಳು' ಪದ್ಯದ ಕರ್ತೃ ಎಂದು ತಿಳಿದಿರುವರೇ ವಿನಾ ಅವರೊಬ್ಬರು ಕಾಲೇಜ್ ಲೆಕ್ಚರರ್, ಎನ್‌ಸಿಸಿ ಆಫೀಸರ್ ಎಂದು ತಿಳಿದಿಲ್ಲ. ಅವರು ನನ್ನನ್ನು "ಗುರುಗಳೇ" ಎಂದು ಸಂಬೋಧಿಸುವುದೂ ನಾನವರನ್ನು "ಕವಿಗಳೇ" ಎಂದು ಹರಸುವುದೂ ಸ್ವಾಭಾವಿಕವಾಗಿ ಹೋಗಿವೆ. ಭಾವಜೀವಿ, ತುಂಬ ಮಮತೆಯ ಹೃದಯ. ಫಕ್ಕನೆ ಸಿಟ್ಟಿಗೆದ್ದು ಏನನ್ನಾದರೂ ಹೇಳುವರು. ಮರುಗಳಿಗೆಯಲ್ಲಿ ಮೊದಲಿಗಿಂತಲೂ ಆತ್ಮೀಯವಾಗಿ ಮಾತಾಡುವರು. ಕೆಲಸದಲ್ಲಿ ನಿಷ್ಣಾತರು. ಹುಡುಗರಿಗೆ ಅಚ್ಚುಮೆಚ್ಚಿನ ಗುರುಗಳು. ಯಾವುದಾದರೊಂದು ತಿರಸ್ಕಾರದ ವಿಚಾರ ಉದ್ಗರಿಸುವಾಗ "ಕತ್ತೆ ಸ್ವರೂಪ" ಎನ್ನುವ ಉಪ್ಪಿನಕಾಯಿಯನ್ನು ಇವರು ಚಪ್ಪರಿಸುವುದನ್ನು ಕೇಳುವುದು ಬಲು ಮೋಜಿನದಾಗಿರುತ್ತದೆ. ಇವರು ಮದುವೆಯಾಗಿ ಒಂದು ವರ್ಷವಾಗುತ್ತ ಬಂದಿದೆ. ಹೆಂಡತಿಯನ್ನು ತವರ್ಮನೆಗೆ ಕಳಿಸಿದ್ದಾರೆ. ಶುಭ ಸಮಾಚಾರ ಯಾವ ಗಳಿಗೆಯಲ್ಲಿಯೂ ಬರಬಹುದು. ನಮ್ಮ ಲಾರಿ ಹೊರಡುವ ತನಕವೂ ಅವರು ಬರುವ, ಬರದಿರುವ ವಿಚಾರದಲ್ಲಿ ಅರೆಮನಸ್ಕರಾಗಿದ್ದರು. ಕವಿ ಹೃದಯ ಹೋಗು ಅನ್ನುತ್ತಿದೆ.

ಸಂಸಾರೀ ಭಾವ ಇಲ್ಲೇ ಇರು ಅನ್ನುತ್ತಿದೆ. ಹೇಗೂ ಟ್ರಂಕ್ ಫೋನ್ ಸೌಕರ್ಯವಿದೆ. ಯಾವಾಗ ಬೇಕಾದರೂ ಹಿಂತಿರುಗಿ ಹೋಗಬಹುದು ಎನ್ನುವ ಆಶ್ವಾಸನೆ ಮೇರೆಗೆ ನಮ್ಮೊಡನೆ ಬಂದರು.

ಶಿವಪ್ಪ – ಬರೀ ಶಿವಪ್ಪ ಅಲ್ಲ, ನಮ್ಮ ಶಿವಪ್ಪ. ಇವರ 'ಏಕಾಂತ' (ಕವನ ಸಂಕಲನ) ಫಕ್ಕನೆ ಇವರನ್ನು ಕನ್ನಡ ನಾಡಿನ ದೊಡ್ಡ ತರುಣ ಕವಿಗಳ ಸಾಲಿನಲ್ಲಿ ಕೂರಿಸಿದೆ. ಸಾತ್ತ್ವಿಕ ಸ್ವಭಾವ. ಯಾವುದರಲ್ಲೂ ದುಡುಕಿಲ್ಲ. ಎಲ್ಲವನ್ನೂ ಶ್ರದ್ಧೆಯಿಂದ ಅನುಭವಿಸಿ ಎಂದಾದರೊಮ್ಮೆ ಅಭಿಪ್ರಾಯ ನೀಡುವ ಅಥವ ಕವನ ಬರೆಯುವ ಕವಿಯಿವರು. ಇವರ ಕರ್ತವ್ಯ ದಕ್ಷತೆಯೂ ಹಾಗೆ – ಅವರ ಕವನದ 'ಲಯಬದ್ಧ ತೂಗಾಟ'ದಂತೆ. ಅಲ್ಲಿ ಗಲಾಟೆ ಗೊಂದಲವಿಲ್ಲ. ತುಂಬ ಆತ್ಮೀಯ ಮಿತ್ರ. ಎಷ್ಟೋ ಸಲ ಅಂದುಕೊಂಡಿದ್ದೇನೆ; ಇವರ ವಿನಯ ಸೌಜನ್ಯ ಎಂಥ ಉನ್ನತ ಶ್ರೇಣಿಯವು ಎಂದು. ನಿಸಾರರ ಪರಮಮಿತ್ರ. ಅವರಿಂದ ತುಂಬ ಪ್ರಭಾವಿತರಾಗಿದ್ದರೂ ಕವನದಲ್ಲಿ ಸ್ವಂತ ಮಾರ್ಗವನ್ನು ತುಳಿದಿರುವ ಓಜಸ್ವಿ. ನಿಸಾರ್ ಮತ್ತು ಶಿವಪ್ಪ ಯಮಳ ನಕ್ಷತ್ರಗಳಂತೆ. ಶಿವಪ್ಪ ಸದಾ ಶಿವಂ.

ಕೆಂಡಗಣ್ಣಸ್ವಾಮಿ – 'ಪೆಸರ್ ಕೇಳಿ ಬಲ್ಲೆಯೇನ್?' ಹೆಸರು ಕೇಳಿ ಹೆದರಬೇಡಿ ಅದರ ಹೊಸತನದಿಂದಾಗಲೀ ಅರ್ಥದಿಂದಾಗಲೀ. 'ಕರುಣೆಗೊಂದು ಕೋಡವನ್ ಎದೆಯೊಲುಮೆಗೆ ಬೀಡವನ್.' ನಾನು ಪ್ರಥಮವಾಗಿ ಈ ಮಿತ್ರರನ್ನು ನೋಡಿದಾಗ ಇವರ ಹೆಸರು, ದಡೂತಿ ಗಾತ್ರ, ಎಣಿಕೆಯ ಮಾತು ಇವುಗಳಿಂದ ಆಕರ್ಷಿತನಾದೆ. (ಸ್ವಲ್ಪ ಭಯವೂ ಸೇರಿತ್ತೋ ಏನೋ!) ನಮ್ಮ ಒಡನಾಟ ಎನ್‌ಸಿಸಿಯಲ್ಲಿಯೂ ಹೊರಗೂ ಹೆಚ್ಚಿದಂತೆ ತುಂಬ ಹಿರಿಯ ಆದರ್ಶವಿಟ್ಟುಕೊಂಡಿರುವ ಸಜ್ಜನ ಇವರು ಎಂಬುದನ್ನು ಅರಿತುಕೊಂಡೆ. ಇವರ ಚುಟುಕುಗಳು, ತಿಳಿ ವ್ಯಂಗ್ಯದ ನುಡಿಗಳು ರಸಿಕತೆಯ ನಿದರ್ಶನಗಳು. ಇವರೂ ನಿಸಾರರಂತೆ ಒಂದು ವರ್ಷದ ಹಿಂದೆ ಮದುವೆಯಾದ ನವವರ. ಬೆಂಗಳೂರಿನಲ್ಲಿ ಇನ್ನೂ ಮನೆ ಮಾಡದೇ (ಆದ್ದರಿಂದ ನಮಗೆ ಮದುವೆಯ ಬಾಬತು ಸಿಹಿ ಹಂಚದೇ) ಭೀಷ್ಮ ಪರ್ವದಲ್ಲಿಯೇ ಇದ್ದರು.

ಮಹಾರಾಷ್ಟ್ರ ರೆಜಿಮೆಂಟಿನ ಸುಬೆದಾರ್ ಖಾನ್ವಿಲ್ಕರ್ ಮತ್ತು ಅವರ ಬೆಂಬಲಿಗರಾದ ಮೂವರು ಎನ್ಸಿಓಗಳು ಪ್ರತಿಯೊಬ್ಬರೂ ದಕ್ಷತೆ, ವಿಶ್ವಾಸಾರ್ಹತೆಯ ಪ್ರತೀಕಗಳು. ಯಾವ ಕೆಲಸವನ್ನು ಎಷ್ಟು ಹೊತ್ತಿಗೂ ಮಾಡಲು ಕಂಕಣ ಬದ್ಧರಾಗಿ ನಿಂತವರು. ಎಲ್ಲ ಸಾಮಾನು ಸರಂಜಾಮುಗಳೂ ಇವರ ಹೊಣೆಗಾರಿಕೆಯಲ್ಲಿದ್ದುವು. "ನಾಳೆ ಬೆಳಗ್ಗೆ ಟೀ ಮತ್ತು ಉಪ್ಪಿಟ್ಟು" ಎಂದರೆ ಸಾಕು. ಅದರ ವಿವರಗಳನ್ನು ಅವರೇ ಪರಿಶೀಲಿಸಿ ಆ ಹೊತ್ತಿಗೆ ಅವನ್ನು ಒದಗಿಸಿಕೊಡುವರು. ಮರುಸವಾಲು, ವಾದ ಎಂಬುದು ಇವರಿಗೆ ಗೊತ್ತಿಲ್ಲ. ಅಂಥ ಉನ್ನತ ಮಟ್ಟದ ಶಿಸ್ತು.

# ದೋಣಿ ಸಾಗಲಿ ಮುಂದೆ ಹೋಗಲಿ

### ಅಧ್ಯಾಯ ಹದಿಮೂರು

ಫೆಬ್ರುವರಿ ೧೦ರ ಸಂಜೆ (೧೯೬೭) ಬೆಂಗಳೂರಿನ ಹೆದ್ದಾರಿಗಳಲ್ಲಿ "ಬೆಂಗಳೂರು ಯೂನಿವರ್ಸಿಟಿಗೆ ಜಯವಾಗಲಿ, ಸರಕಾರಿ ಕಾಲೇಜಿಗೆ ಜಯವಾಗಲಿ, ೧೨ನೇ ಮೈಸೂರಿಗೆ ಜಯವಾಗಲಿ, ಕುದುರೆಮುಖ ಆರೋಹಣ ಸಾಹಸಕ್ಕೆ ಜಯವಾಗಲಿ" ಎನ್ನುವ ಘೋಷಣೆಗಳು ಎಲ್ಲರ ಗಮನವನ್ನು ಓಡುತ್ತಿದ್ದ ಎರಡು ಎನ್‌ಸಿಸಿ ಲಾರಿಗಳೆಡೆಗೆ ಸೆಳೆದುವು. ಸಮವಸ್ತ್ರ ಧರಿಸಿದ, ನವಹರ್ಷ ಹರಿಸುವ, ನಗುಮೊಗದ ಆ ೩೭ ಕ್ಯಾಡೆಟ್ಟುಗಳು ಅತಿ ದೂರದ ಅತಿ ಎತ್ತರದ ಕುದುರೆಮುಖದೆಡೆಗೆ ಆಗ ಸಾಹಸ ಪ್ರದರ್ಶನಕ್ಕಾಗಿ ಧಾವಿಸುತ್ತಿದ್ದರು. ಬೆಂಗಳೂರು ನಗರ ವಿದ್ಯುದ್ದೀಪದ ಕಡಲಿನಲ್ಲಿ ಕಂತಿದ್ದಾಗ, ಈ ಕಡಲಿನ ಸಾರವೇ ಪಶ್ಚಿಮಾಕಾಶದಲ್ಲಿ ಅತ್ಯಂತ ಪ್ರಭಾನ್ವಿತ ಶುಕ್ರ, ಬುಧ, ಚಂದ್ರ ಆಗಿ ಸಾಲಾಗಿ ಕಂಗೊಳಿಸುತ್ತಿದ್ದಾಗ ನಮ್ಮ ಲಾರಿಗಳು ಕತ್ತಲೆಯ ಮೊತ್ತವನ್ನು ಸೀಳಿ ಮುಂದುವರಿದುವು. ಲಾರಿಯ ಒಳಗೆ ಎಲ್ಲರೂ ಕುಳಿತಿರಬೇಕು, ಬದಿಯ ಚೌಕಟ್ಟಿನ ಮೇಲೆ ಪರಂಗಿ ಮಣೆಯಂತೆ ಕುಳಿತರಲೇಬಾರದು. ಹೀಗೆ ಕುಳಿತಿದ್ದರೆ ಬೆನ್ನು ಲಾರಿಯ ರೇಖೆಯಿಂದ ಹೊರಗೆ ಚಾಚಿರುತ್ತದೆ. ಎರಡು ವಾಹನಗಳು ಸಂಧಿಸುವಾಗ ಅಥವಾ ಒಂದನ್ನು ಇನ್ನೊಂದು ಹಿಂದೆ ಹಾಕಿ ಓಡುವಾಗ ಅಪಾಯ ಸಂಭವಿಸಬಹುದು.

ರಾತ್ರಿಯ ೮ ಗಂಟೆ ದಾಟಿದಾಗ ಕುಣಿಗಲ್ಲಿನ ಪ್ರವಾಸೀ ಮಂದಿರ ತಲಪಿದೆವು. ನಾವು ತಂದಿದ್ದ ಮೊಸರನ್ನ, ಚಿತ್ರಾನ್ನ ಎಲ್ಲವನ್ನೂ ಅಲ್ಲಿ ತಿಂದು ಪುನಃ ಲಾರಿಗಳನ್ನೇರಿದೆವು. ಮಿಣುಕು ದೀಪಗಳಂತೆ ಲಾರಿಗಳು ಕತ್ತಲೆಯ ಗರ್ಭವನ್ನು ಹರಿದುವು. ಎಷ್ಟೋ ಮೈಲುಗಳಿಗೊಮ್ಮೆ ಎದುರಿನಿಂದ ಬರುತ್ತಿದ್ದ ಯಾವುದೋ ಲಾರಿ, ಹಳ್ಳಿಯ ಸಮೀಪದ ಪೋಲಿನಾಯಿಗಳ ಬೊಗಳುವಿಕೆ ಅಲ್ಲದಿದ್ದರೆ ನಮ್ಮ ಲಾರಿಗಳು ಒಂದೇ ಶ್ರುತಿ ಮಿಡಿಯುತ್ತ ಧಾವಿಸಿದುವು. ದಾರಿ ನೆಟ್ಟಗೆ. ನಾನೂ ದೊರೆಗಳೂ ಹಿಂದಿನ ಲಾರಿಯ ಮುಂದಿನ ಸೀಟಿನಲ್ಲಿದ್ದೆವು. ಇದ್ದಕ್ಕಿದ್ದ ಹಾಗೆ ನಮ್ಮನ್ನು ಎದುರಿನಿಂದ ಇದ್ದಲು ಮೂಟೆ ಹೇರಿದ್ದ ಒಂದು ಭಾರೀ ಲಾರಿ ದಾಟಿ ಹೋಯಿತು. ಅದರಿಂದ ವಿಪರೀತ ಮಸಿ, ಮಸಿಹುಡಿ

ಸುರಿಯುತ್ತಿದ್ದುವು. ಮಾತ್ರವಲ್ಲ, ಅಲ್ಲೆಲ್ಲ ಮಸಿಯ ಧೂಳು ತುಂಬಿ ನಮಗೆ ದಾರಿ ಕಾಣಿಸದಂತಾಯಿತು. ಇಷ್ಟರಲ್ಲಿಯೇ ನಮ್ಮ ಮುಂದಿನ ಲಾರಿ ರಸ್ತೆ ಬದಿಗೆ ನಿಂತಿತ್ತು. "ಆಕ್ಸಿಡೆಂಟ್" ಎಂದು ಅಲ್ಲಿಂದ ಯಾರೋ ಕೂಗಿದರು. ನಮಗೆ ನೆತ್ತರು ಹೆಪ್ಪುಗಟ್ಟಿತು. ಲಾರಿಯ ಬದಿಯ ಚೌಕಟ್ಟಿನ ಮೇಲೆ ಸುತ್ತಿದ್ದ ಟಾರ್ಪಾಲಿನ್ನಿಗೆ ಇದ್ದಲು ಲಾರಿಯಿಂದ ಹೊರಗೆ ಚಾಚಿದ್ದ ಮೂಟೆಗಳು ಢಿಕ್ಕಿ ಹೊಡೆದು ಟಾರ್ಪಾಲಿನ್ ಹರಿದು ಹೋಗಿತ್ತು. ಅದರ ಮೂಲಕ ಒಳಗೆ ಕುಳಿತವರಿಗೆ ಸಾಕಷ್ಟು ಮಸಿಯ ಅಭಿಷೇಕವಾಗಿತ್ತು. ಢಿಕ್ಕಿ ಹೊಡೆದ ಲಾರಿ, ನಿಂತರೆ ಅಪಾಯವೆಂದು, ಚೆಲ್ಲುತ್ತಿದ್ದ ಮಸಿಯನ್ನು ಲೆಕ್ಕಿಸದೇ ಓಡಿಯೇ ಹೋಗಿತ್ತು. ಸದ್ಯ ಯಾರಿಗೇನೂ ಅಪಾಯವಾಗಿರಲಿಲ್ಲ. ಚೌಕಟ್ಟಿನ ಮೇಲೆ ಯಾರಾದರೂ ಕುಳಿತಿದ್ದರೆ ಆ ಗಳಿಗೆಯಲ್ಲಿ ಭೀಕರ ದುರಂತ ಸಂಭವಿಸಿರುತ್ತಿದ್ದುದರಲ್ಲಿ ಸಂದೇಹವೇ ಇಲ್ಲ.

ಚಳಿಗಾಳಿ ಕೊರೆಯುತ್ತಿತ್ತು. ರಾತ್ರಿ ಏರುತ್ತಿತ್ತು. ಲಾರಿಯೊಳಗೆ ಕುಳಿತವರಿಗೇನೂ ಸುಖವಲ್ಲ. ಸಾಮಾನು ಸರಂಜಾಮುಗಳ ನಡುವೆ ಹೇಗೆ ಕುಳಿತರೂ ಮೈ ಕೈ ನೋವು ತಪ್ಪಿದ್ದಲ್ಲ. ಅಂತೂ ೧ ಗಂಟೆಗೆ ಯಾವುದೋ ಒಂದು ಪಟ್ಟಣ ಸೇರಿದೆವು. ರಸ್ತೆ ದೀಪಗಳು ಉರಿಯುತ್ತಿದ್ದುವು. ಇತಿಹಾಸ ಪ್ರಸಿದ್ಧ ಬೇಲೂರು ಪಟ್ಟಣವದು. ಅಲ್ಲಿಯ ಪ್ರವಾಸೀ ಮಂದಿರದ ಅಂಗಳದಲ್ಲಿ ಲಾರಿಗಳನ್ನು ನಿಲ್ಲಿಸಿ ಮಂದಿರದ ಜಗಲಿ, ಕೋಣೆ ಎಲ್ಲ ನಾವೇ ವ್ಯಾಪಿಸಿಕೊಂಡೆವು. ಚಳಿ, ನಿದ್ರೆ, ಆಯಾಸ ಮುಪ್ಪುರಿಗೊಂಡು ಹುಡುಗರನ್ನು ಕಾಡುತ್ತಿದ್ದುವು. ಕಿಟ್ ಬ್ಯಾಗ್ ಬಿಡಿಸಿದೆವು. ಡರಿ, ಬ್ಲಾಂಕೆಟ್ ಹರಡಿದೆವು. ಕಾಲು ಚಾಚಿದ್ದೊಂದೇ ಗೊತ್ತು. ಪ್ರವಾಸೀ ಮಂದಿರದ ಹೊರವಲಯದಲ್ಲಿ ಯಕ್ಷಗಾನ ಬಯಲಾಟ ನಡೆಯುತ್ತಿತ್ತು. ಆ ರಾಕ್ಷಸರ ಗರ್ಜನೆ, ಚಂಡೆ ಮದ್ದಳೆಗಳ ಸಿಂಹನಾದ ಯಾವುದೂ ನಮ್ಮನ್ನು ಎಚ್ಚರದಿಂದಿಡಲು ಶಕ್ತವಾಗಲಿಲ್ಲ. ಮಲಗುವ ಮುನ್ನ ಸೀನಿಯರ್ ಅಂಡರ್ ಆಫೀಸರ್ (ಕ್ಯಾಡೆಟ್ಟುಗಳಲ್ಲಿ ಪರಮೋನ್ನತ ಪದವಿ – ಅವರ ಮುಂದಾಳು) ಬಾಬಾ ಪ್ರಸಾದನಿಗೆ ಆದೇಶ ಕೊಟ್ಟೆ. "೬ ಗಂಟೆಗೆ ಹಾಸಿಗೆ ಚಾ, ೬–೩೦ ಗಂಟೆ ತನಕ ದೇವಾಲಯ ದರ್ಶನ. ಕೂಡಲೇ ಉಪಾಹಾರ. ೮ ಗಂಟೆಗೆ ಮುಂದಿನ ಪ್ರಯಾಣ." 'ಹಾಸಿಗೆಯಿಂದ ಚಾಲನ ಮಾಡಿಸುವಂಥಾದ್ದು ಇಂತೆಂದು ಹಾಸಿಗೆ ಚಾ' ಇದು ಇಂಗ್ಲಿಷಿನ ಬೆಡ್ ಟೀಯ ತದ್ಭವದ ವ್ಯುತ್ಪತ್ತಿ. ಬೆಳಗ್ಗೆ ಬೇಗ ಏಳಿ ಅಂದರೆ ಆಗಿನ ಮನಸ್ಥಿತಿಯಲ್ಲಿ ಯಾರಿಗೂ ಇಷ್ಟವಾಗಲಾರದು. ಹಾಸಿಗೆ ಚಾ ಎನ್ನುವ ಸಕ್ಕರೆ ಗುಳಿಗೆಯೊಳಗೆ ಇದೇ ಕಹಿ ವಿಚಾರವನ್ನು ತುಂಬಿದರೆ ಅದರ ಪರಿಣಾಮ ಅಷ್ಟೊಂದು ಅಹಿತಕರವಾಗದು.

ನಮ್ಮ ಯಾತ್ರೆಯ ಪ್ರಥಮ ಪ್ರಾತಃಕಾಲ ಬೇಲೂರಿನ ಶಿಲಾಸಂಗೀತ ಶ್ರವಣದಿಂದ ಪ್ರಾರಂಭವಾಯಿತು.
"ಜಕಣಾಚಾರಿಯ ಕಲೆಯ ಬಲೆಯಲ್ಲಿಯೇ ಹತ್ತು ದಿವಸಗಳನ್ನೂ ಕಳೆಯಬಾರದೇ?" ಎಂದನು ಮುಕುಂದ.
"ವಿಶ್ವಕರ್ಮನ ಕವಿತೆಯೇ ನಮಗೆ ಕುದುರೆಮುಖದ ಮೇಲೆ ಕಾದಿರುವಾಗ..." ಎಚ್ಚರಿಸಿದನು ಚಂದ್ರಶೇಖರ.
ಹುಡುಗರೇನೋ ಮರಳಿದರು. ಆದರೆ ಕವಿದ್ವಯರನ್ನು ಕಲ್ಪನೆಯ ಭಾವನಾಪ್ರಪಂಚದಿಂದ ಉಪಾಹಾರದ ಮೃತ್ತಿಕಾಪ್ರಪಂಚಕ್ಕೆ ಎಳೆದು ತರಲು ಎರಡೆರಡು ಸಲ ಜನರನ್ನು ಅಟ್ಟಬೇಕಾಯಿತು. ಭಾವಪಾರವಶ್ಯದಲ್ಲಿ ಕಾಲ ಕಾಲವಾಗಿರುತ್ತದೆ.

ಬೇಲೂರಿನಿಂದ ಮುಂದೆ ಮಲೆನಾಡಿನ ತಂಪು. ಹಚ್ಚ ಹಸುರಿನ ಹರವು. ಬಿಸಿಲು ಬೆಳದಿಂಗಳು. ಡೊಂಕು ಡೊಂಕಾದ ದಾರಿ ಕಾಫಿ ತೋಟಗಳನ್ನು ಬಳಸಿ ಕಿತ್ತಳೆ ಮರಗಳ ಸಾಲಿನೆಡೆಗಾಗಿ ಸಾಗುವ ಮೇಖಲೆ. ಸಮೀಪದ ದಾರಿ ಎಂದು ಎಡಗಡೆಯ ಕವಲು ದಾರಿಗಾಗಿ ಹೋದದ್ದು ಹಳ್ಳಿಗಾಡಿನ ಧೂಳರಾಶಿಗಾಗಿ ಮುಂದುವರಿಯಿತು. ಧೂಳು ತಿಂದ ಹಿಂದಿನ ಲಾರಿಯವರಿಗೆ ಹಸುರು ಅರಸಿನವಾಯಿತು. ಟಾರ್ಪಾಲಿನ್ ಮುಚ್ಚಿದ್ದ ಲಾರಿಯ ಹಿಂಭಾಗ ಗಾಳಿ ಸಂಚಾರವಿಲ್ಲದೇ ಕುಳಿತಿರಲು ಕಷ್ಟವೆಂದೆನ್ನಿಸಿತು. ಬಯಲು ಸೀಮೆಯ ಹುಡುಗರು ವಾಂತಿ ಮಾಡಿದರು! ಪ್ರಕೃತಿ ಸೌಂದರ್ಯ ಹುಚ್ಚು ಹೊಳೆ ಹರಿದಿರುವಾಗ ಮುಸುಕೆಳೆದು ಕೂರುವುದುಂಟೇ! ಟಾರ್ಪಾಲಿನ್ ಬಿಚ್ಚಿದ ಮೇಲೆ ಅದೆಷ್ಟೋ ಸುಖವಾಯಿತು. ಅತಿ ದೂರದ ಬಾನಿನ ನೀಲಿಯ ಮೇಲೆ ರೇಖಾಚಿತ್ರಗಳಾಗಿ ಕಾಣುತ್ತಿದ್ದ ಪರ್ವತಶ್ರೇಣಿಗಳು ಕ್ರಮೇಣ ಸ್ಪಷ್ಟವಾಗತೊಡಗಿದುವು. ಚಾರ್ಮಾಡಿ ಘಾಟಿನ ಮೇಲೆ ನಾವಿದ್ದೆವು. ಒಂದೊಂದು U ತಿರುಗಾಸಿಗೂ ನಡುವೆ ಮಹಾ ಪ್ರಪಾತ.

ಮಲೆನಾಡಿನ ತೊರೆ ದುಮುಕುವ ಹಿಸ್‌ನಾದ. ಒಂದು ಸಲ ಬಲಗಡೆಗೆ ಎತ್ತರದ ಬೆಟ್ಟ, ಎಡಗಡೆಗೆ ಆಳವಾದ ಕಣಿವೆ ಇದ್ದರೆ ಇನ್ನೊಂದು ಸಲ ಇದು ತಿರುಗಾಮುರುಗಾ ಆಗುವುದು. ಹೀಗೆ ಹದಿನಾರೋ ಹದಿನೇಳೋ U ತಿರುಗಾಸುಗಳು ಮುಗಿದಾಗ ನಾವು ಚಾರ್ಮಾಡಿಯ ತಳ ಸೇರಿದ್ದೆವು.

ಮುಂದಿನ ದಾರಿ ದಕ್ಷಿಣ ಕನ್ನಡ ಜಿಲ್ಲೆಯ ತೆಂಗುಕಂಗುಗಳ ಗೇರುಬಾಳೆಗಳ ನಡುವಿನ ಹಾಡು. 'ಪಡುವಣ ಕಡಲಿನ ತೆಂಗಿನ ಮಡಲಿನ ಮರೆಯಲಿ ಮೆರೆಯುವ' ನಾಡು. ಎಲ್ಲೆಂದರಲ್ಲಿ ದಟ್ಟವಾಗಿ ಬೆಳೆದಿದ್ದ ಕಾಡು. ಮರಗಳೆಡೆಯಿಂದ ಸೂರ್ಯ ಕೊರೆಯುತ್ತಿದ್ದ. ನಮ್ಮ ಲಾರಿಗಳ ನಿನದದ ವಿನಾ ಬೇರೆಲ್ಲೆಲ್ಲೂ ನೀರವ ಶಾಂತಿ. ಬೆಂಗಳೂರಿನ ಹುಡುಗರನ್ನು ದಕ್ಷಿಣ ಕನ್ನಡದ ಕಡಲತಡಿಯ ಸೆಕೆ ಬೇಯಿಸುತ್ತಿತ್ತು. ಲಾರಿ ನಿಂತಾಗಲೆಲ್ಲ ಇದರ ಅರಿವು ಹೆಚ್ಚಾಗುತ್ತಿತ್ತು. ಮುರಕಲ್ಲಿನ ಆ ಕೆಮ್ಮಣ್ಣು ಈ ಸೆಕೆಯ ಭಾವನೆಯನ್ನು ಹೆಚ್ಚು ಮಾಡುತ್ತಿತ್ತು. ರಸ್ತೆ ಬದಿಯ ಗಿಡ ಮರಗಳ ಎಲೆಗಳು ಕೆಂಧೂಳಿನಿಂದ ಅದೇ ಬಣ್ಣಕ್ಕೆ ತಿರುಗಿದ್ದುವು. ನೀರು ಹರಿಯುವುದು ಕಂಡಲ್ಲೆಲ್ಲ ನಾವಿಲ್ಲಿಯೇ ತಂಗಬಾರದೇ, ಈ ನೀರಿನೊಳಗೇ ಬಿದ್ದುಕೊಂಡು ಇರಬಾರದೇ ಎಂಬ ಭಾವನೆ ಬರುತ್ತಿತ್ತು.

ಸೂರ್ಯ ನೆತ್ತಿಗೇರುವ ಮೊದಲೇ ಉಜಿರೆ ಸೇರಿದೆವು. ಬೆಂಗಳೂರು – ಚಾರ್ಮಾಡಿ – ಮಂಗಳೂರು ಮಾರ್ಗದಲ್ಲಿ ಉಜಿರೆಯೊಂದು 'ಜಂಕ್ಷನ್'. ಅಲ್ಲಿಂದ ಎಡಗಡೆಗೆ ೬ ಮೈಲು ಮುಂದೆ ಹೋದರೆ ಪವಿತ್ರ ಕ್ಷೇತ್ರ ಧರ್ಮಸ್ಥಳ ಬರುವುದು. ಉಜಿರೆಯಿಂದ ಸೀದಾ (ಮಂಗಳೂರಿನೆಡೆಗೆ) ಮುಂದೆ ಹೋದರೆ ೨ ಮೈಲು ದೂರದಲ್ಲಿ, ಬೆಳ್ತಂಗಡಿ ತಲಪುವ ಮೊದಲೇ ಬಲಗಡೆಗೆ ಒಂದು ಹಳ್ಳಿ ದಾರಿಯಿದೆ. ಇದರಲ್ಲಿ ೭ ಮೈಲು ದೂರ ಸಾಗುವಾಗ ನಾವೂರು ಎನ್ನುವ ಕುಗ್ರಾಮ ಬರುವುದು. ಅದು ಕುದುರೆಮುಖದ ತಳ. ಉಜಿರೆಯಿಂದ ನಾವೂರಿಗೆ ಕಾಲುದಾರಿಗಾಗಿಯೂ ಹೋಗಬಹುದು. ಧರ್ಮಸ್ಥಳ, ಕುದುರೆಮುಖ ಶ್ರೇಣಿ ಎದುರು ಬದಿರಾಗಿವೆ.

ಉಜಿರೆಯಲ್ಲಿ ಧರ್ಮಸ್ಥಳದ ಹೆಗಡೆಯವರೊಂದು ಗುರುಕುಲಾಶ್ರಮ, ಒಂದು ಬೋರ್ಡಿಂಗ್, ಒಂದು ಕಾಲೇಜ್ ಎಲ್ಲವನ್ನೂ ಸ್ಥಾಪಿಸಿದ್ದಾರೆ. ಇವೆಲ್ಲ ಇರುವ ಆವರಣದ ಹೆಸರು ಸಿದ್ಧವನ. ಸಿದ್ಧವನದ ಮುಂದೆ ಲಾರಿಗಳು ಓಡುತ್ತಿದ್ದಾಗ ಒಬ್ಬ ಜೂನಿಯರ್ ಡಿವಿಶನ್ ಎನ್‌ಸಿಸಿ ಸಮವಸ್ತ್ರಧಾರಿ ಬಾಲಕ ಸುಟಿಯಾಗಿ ನಿಂತು ಕೈ ಅಡ್ಡ ಹಿಡಿದು ಲಾರಿಗಳನ್ನು ನಿಲ್ಲಿಸಿದ. ಸೆಲ್ಯೂಟ್ ನೀಡಿ, "ಮೇಜರ್ ಮುತ್ತಪ್ಪನವರು ಇಲ್ಲಿಯೇ ಒಳಗೆ ನಿಮಗಾಗಿ ಕಾಯುತ್ತಿದ್ದಾರೆ, ಸರ್! ಬರಬೇಕಂತೆ" ಎಂದ.

ಮೇಜರ್ ಮುತ್ತಪ್ಪನವರು ಮಂಗಳೂರಿನ ಎನ್‌ಸಿಸಿಯ ಮುಖ್ಯಾಧಿಕಾರಿಗಳು, ನನಗೆ ಕಳೆದ ೧೨–೧೩ ವರ್ಷಗಳಿಂದಲೂ ಪರಿಚಿತರು, ಮಿತ್ರರು. ಅವರು ಬೆಂಗಳೂರಿನ ಎನ್‌ಸಿಸಿ ಮುಖ್ಯ ಕಚೇರಿಯಲ್ಲಿ ವರಿಷ್ಠಾಧಿಕಾರಿಗಳಾಗಿದ್ದಾಗ ತಮ್ಮ ದಕ್ಷತೆ, ಕಾರ್ಯ ಧುರಂಧರತೆಗಳಿಂದ ಸರ್ವಜನಪ್ರಿಯರಾಗಿದ್ದರು. ಮೇಜರ್ ನಾರಾಯಣ್ ಸಿಂಗ್ ಮತ್ತು ಮೇಜರ್ ಮುತ್ತಪ್ಪ ಇವರ ಗೆಳೆತನ ಎಷ್ಟೋ ದಶಕಗಳದು. ನಾವು ಬರುವ ವಿಚಾರ ತಿಳಿದು ಮುತ್ತಪ್ಪನವರು ತಾವಾಗಿಯೇ ಉಜಿರೆಗೆ ಬಂದಿದ್ದರು. ಹಳೆಯ ಮಿತ್ರರ ಅಪೂರ್ವ ಸಮಾಗಮ. ಸಂತೋಷವೋ ದುಃಖವೋ ತಿಳಿಯದು. ದೊರೆಗಳ ಸಂಕಟ ಮುತ್ತಪ್ಪನವರಿಗೆ ಗೊತ್ತಿತ್ತು.

ಮುತ್ತಪ್ಪನವರೊಂದಿಗೆ ಇನ್ನೂ ಮೂವರು ತರುಣರಿದ್ದರು. ಟೆರಿಲಿನ್ ಪ್ಯಾಂಟ್, ಷರ್ಟ್, ಟೈಧಾರಿಗಳು. ಸುಟಿಯಾಗಿ ನಿಂತು ಹಸನ್ಮುಖದಿಂದ ನಮ್ಮನ್ನು ನೋಡುತ್ತಿದ್ದರು.
"ಬನ್ನಿ, ಇವರು ಮಿ. ಪ್ರಭಾಕರ್, ಈ ಕಾಲೇಜಿನ ಪ್ರಿನ್ಸಿಪಾಲ್, ಇವರು ಮಿ. ಶೆಣೈ ಇಲ್ಲಿಯ ಎನ್‌ಸಿಸಿ ಆಫೀಸರ್, ಇವರು ಡಾ. ಪೂಜಾರರು, ಮಂಗಳೂರಿನಿಂದ ಬಂದಿದ್ದಾರೆ. ನಿಮ್ಮೊಡನೆಯೇ ಇರಲೆಂದು ಸರಕಾರ ಇವರನ್ನು ಕಳಿಸಿದೆ. ಆರ್ಡರ್ಲೀ ಬಂದಿದ್ದಾನೆ, ಔಷಧಿಗಳೂ ಬಂದಿವೆ" ಮೇಜರ್ ಮುತ್ತಪ್ಪನವರು ಪರಿಚಯಿಸಿದರು.

ಅಲ್ಲಿ ಹೆಚ್ಚು ಹೊತ್ತು ಕಳೆಯದೇ ಕೂಡಲೇ ಧರ್ಮಸ್ಥಳದೆಡೆಗೆ ಲಾರಿ ಓಡಿಸಿದೆವು. ದಾರಿಯಲ್ಲಿ ನೇತ್ರಾವತಿ ನದಿಯಲ್ಲಿ ಹತ್ತು ಮಿನಿಟಿದ್ದು ಕೈಕಾಲು ಮುಖ ತೊಳೆದುಕೊಂಡು ಶುಚಿರ್ಭೂತರಾಗಿ ಹೋದೆವು. ಮಹಾಪೂಜೆಗೆ ತಡವಾಯಿತೋ ಏನೋ ಎಂಬ ತವಕದಿಂದ ತ್ವರೆಯಿಂದ ಓಡಿದ ನಮಗೆ ಪೂಜೆ ಮಂಗಳಾರತಿ ದರ್ಶನ ಲಭಿಸಿದುವು. ನಾವು ಬರುವ ವಿಚಾರ ಧರ್ಮಾಧಿಕಾರಿ ರತ್ನವರ್ಮ ಹೆಗ್ಗಡೆಯವರಿಗೆ ಮೊದಲೇ ಬರೆದಿದ್ದೆವು. ಅವರ ಚಿರಂಜೀವಿ ವೀರೇಂದ್ರ ಕುಮಾರರು ನಮ್ಮ ಕಾಲೇಜಿನ ವಿದ್ಯಾರ್ಥಿ ಆಗಿದ್ದುದು ನಮಗೆ ಹೆಚ್ಚಿನ ಆತ್ಮೀಯತೆ ತಂದುಕೊಟ್ಟಿತ್ತು.

ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರಸ್ವಾಮಿ ದೇವಾಲಯ. ಆ ಪವಿತ್ರ ಕ್ಷೇತ್ರ ಹಿಂದೂಗಳಿಗೂ ಜೈನರಿಗೂ ಸಮಾನವಾಗಿ ಪುಣ್ಯ ಕ್ಷೇತ್ರವಾಗಿದೆ. ಜೈನ ಪರಂಪರೆಯ ಹೆಗ್ಗಡೆಯವರ ಖಾಸಗಿ ಸಂಸ್ಥೆ ಈ ದೇವಾಲಯ ಮತ್ತು ಇದಕ್ಕೆ ಸಂಬಂಧಿಸಿದ ವಿಶಿಷ್ಟ ಆಸ್ತಿಪಾಸ್ತಿ. ಲಕ್ಷಾಂತರ ಭಕ್ತಾದಿಗಳು ವರ್ಷವಿಡೀ ಬಂದು ಹೋಗುವ ಈ ಪವಿತ್ರ ಕ್ಷೇತ್ರದ ಆಡಳಿತವನ್ನು ಹೆಗ್ಗಡೆಯವರು ಸ್ವತಃ ನಿರ್ವಹಿಸುತ್ತಾರೆ.

ಉಳಿದುಕೊಳ್ಳಲಿಕ್ಕೆ ಬೇಕಾದ ಛತ್ರಗಳು, ಕಟ್ಟಡಗಳು ಮುಂತಾದವು ಇಲ್ಲಿವೆ. ಮಹಾಪೂಜೆಯ ಕಾಲದಲ್ಲಿಯೂ ಬೇರೆ ನಿಶ್ಚಿತ ವೇಳೆಗಳಲ್ಲಿಯೂ ಹೆಗ್ಗಡೆಯವರು ಭಕ್ತರಿಗೆ ದರ್ಶನವೀಯುತ್ತಾರೆ. ಅವರ ಹಾಲೆ ಅಹವಾಲೆಗಳನ್ನು, ಕಷ್ಟ ಸಂಕಟಗಳನ್ನು ಆಲಿಸುತ್ತಾರೆ. ಯುಕ್ತ ಪರಿಹಾರ ಸೂಚಿಸುತ್ತಾರೆ. ಇಲ್ಲಿ ನಾವು ಕಾಣುವುದು ಭಕ್ತರಿಗೆ ಆ ಸ್ಥಳದಲ್ಲಿ, ದೇವರಲ್ಲಿ, ದೇವರ ಮೂರ್ತ ಹೆಗ್ಗಡೆಯವರಲ್ಲಿರುವ ಅನನ್ಯ ಭಕ್ತಿ. ಆ ಗಳಿಗೆಯಲ್ಲಿ ಭಕ್ತರಿಗೆ ಹೆಗ್ಗಡೆಯವರ ವಾಣಿ ಶ್ರೀ ಮಂಜುನಾಥಸ್ವಾಮಿಯ ಆಜ್ಞೆ, ಅದನ್ನು ಅವರು ಶಿರಸಾವಹಿಸುತ್ತಾರೆ, ಕಲ್ಯಾಣ ಹೊಂದುತ್ತಾರೆ. ಭಕ್ತಿ, ಶ್ರದ್ಧೆ, ನಂಬಿಕೆ ಎನ್ನುವ ಗುಣಗಳ ಸಮತಳದಲ್ಲಿ ನಡೆದು ಮಂಜುನಾಥ ಸ್ವಾಮಿಯ ಸನ್ನಿಧಿಯಲ್ಲಿ ತೃಪ್ತಿ, ಸಂತೋಷ ಹೊಂದುವ ಈ ಜನತೆಯ ವಿಶ್ವಾಸ ಅಪಾರವಾದದ್ದು, ಅಚಲವಾದದ್ದು. ಅಂತೆಯೇ ಅವರ ಭಕ್ತಿಯ ಪ್ರತೀಕವಾಗಿ ಆ ದೇವಲಯ ಅತಿ ಪುರಾತನವಾದದ್ದೂ ಮಹಿಮಾಪೂರ್ಣವಾದದ್ದೂ ಆಗಿದೆ. ಇಂಥ ಪುನೀತ ದಿವ್ಯ ಸ್ಥಳ, ಅಲ್ಲಿಯ ಚಿರಂತನ ಚೇತನ ನಮ್ಮ ಸಾಹಸ ಕೃತ್ಯದ ಮೇಲೆ ಒಂದು ದೈವಿಕ ಪ್ರಭೆ ಬೀರಿದುವು. ದೇವರ ಪ್ರಸಾದವಾದ ಊಟವನ್ನು ಮುಗಿಸಿಕೊಂಡು ನಾವೂರಿಗೆ ಹೊರಟೆವು. ಮುತ್ತಪ್ಪನವರು ಮಂಗಳೂರಿಗೆ ಮರಳಿದರು. ಡಾಕ್ಟರರೂ ಅವರ ಆರ್ಡರ್ಲಿಯೂ ನಮ್ಮ ಪಂಗಡ ಸೇರಿದರು. ಈಗ ನಮ್ಮ ಸಂಖ್ಯೆ ೫೩ಕ್ಕೇರಿತು.

ನಮ್ಮ ನಾವೂರು ಪ್ರಯಾಣ ಅಥವಾ ಕುದುರೆಮುಖದೆಡೆಗಿನ ಲಾರೀ ಪಯಣದ ಕೊನೆಯ ಅಂಕ, ಸುಮಾರು ೧೫ ಮೈಲುಗಳಷ್ಟು ದೂರ. ಪ್ರಾರಂಭವಾದದ್ದು ನಡುಹಗಲಿನ ೨ ಗಂಟೆಗೆ. ನಾವು ೪ ಗಂಟೆಗೆ ಮೊದಲೇ ನಾವೂರು ಸೇರಿ ಶಿಬಿರ ಹೂಡಬೇಕು ಎನ್ನುವುದು ನಮ್ಮ ಕಾರ್ಯಕ್ರಮ. ಅಲ್ಲಿ ಮೆಂಗಿಲ ಶೇಣವ ಎನ್ನುವ ಮಾರ್ಗದರ್ಶಿಗೂ ಅರಣ್ಯ ಇಲಾಖೆಯ ಅಧಿಕಾರಿಗಳಿಗೂ ನಮ್ಮನ್ನು ಕಾದಿರಲು ಕಾಗದ ಬರೆದಿದ್ದೆವು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವುದು ಎರಡೇ ಋತುಗಳು: ಬೇಸಗೆ, ಬಿರುಬೇಸಗೆ. ಫೆಬ್ರುವರಿಯ ನಡು ಹಗಲಿನ ಬಿಸಿಲ ಝಳ ತೀವ್ರವಾಗಿತ್ತು. ಧರ್ಮಸ್ಥಳ – ಉಜಿರೆಯ ಹಾವು ಹರಿವಂಥ ಹಳ್ಳಿ ಮಾರ್ಗ, ಎದುರಿಗೆ ದೂರದಲ್ಲಿ ಆಕಾಶವನ್ನೇ ಎತ್ತಿ ಹಿದಿದಿರುವ ಪರ್ವತಶ್ರೇಣಿ. ಈಶ್ವರ ದೇವಾಲಯದ ಮುಂದಿರುವ ನಂದಿಯಂತೆ ಈ ಶ್ರೇಣಿಯ ಎದುರು ನಮಗೆ ಕೈದೂರದಲ್ಲಿ ನೀಳವಾಗಿ ಸೆಟೆದು ನಿಂತಿರುವ ಹೆಬ್ಬಂಡೆ ಜಮಾಲಾಬಾದ್. ಅದೊಂದು ಗಿರಿದುರ್ಗ. ಪರ್ವತ ಶ್ರೇಣಿಯಲ್ಲಿ ಅತಿ ಎತ್ತರವಾಗಿರುವೆಡೆಯಲ್ಲಿ ಕತ್ತರಿಯಿಂದ ಕತ್ತರಿಸಿ ಇಟ್ಟಂಥ ಸ್ಪಷ್ಟಾಕೃತಿಯ ಶಿಖರ ಕುದುರೆಮುಖ. ಆ ಭವ್ಯನೋಟ ನಮ್ಮನ್ನು ಪುಳಕಿತಕಾಯರನ್ನಾಗಿಸಿತು. ಕುದುರೆಮುಖದ ಗೆರೆ ಅಲ್ಲಿಂದ ಬೆನ್ನಿನವರೆಗೆ ಇಳಿದು ಕೇಸರದ ರೇಖೆ ಸ್ಪಷ್ಟವಾಗಿ ಕಾಣುವುದು. ಆಕಾಶದ ನೀಲಿ ಪರದೆಯ ಮೇಲೆ ಕುಂಚಿಸಿದ್ದ ಚಿತ್ರವಿದು. ಲಾರಿ ಸಾಗಿದಂತೆ ಕಲ್ಪನೆಯ ಲಂಗುಲಗಾಮಿಲ್ಲದ ಕುದುರೆ ಆ 'ಹಯವದನ'ದ ಮೇಲೆ ನಾಗಾಲೋಟದಿಂದ ವಿಹರಿಸಿ, ಆಗಲೇ ಹಾರಿಹೋಗಿ ಕುಳಿತಂತೆ ಊಹಿಸಿತು. ಹೀಗೆ ಕಲ್ಪನೆ ಗಗನವೇರಿದಾಗ ವಾಸ್ತವತೆ ರಸ್ತೆಯಲ್ಲಿ ಕುಂಟುತ್ತಿತ್ತು. ಲಿಂಗೋಜಿಯ ಲಾರಿ ನಿಂತೇ ಬಿಟ್ಟಿತು. ಧರ್ಮಸ್ಥಳದಿಂದ ಮೂರು ಮೈಲು ಬಂದಿದ್ದೆವಷ್ಟೆ. ಇನ್ನೂ ೧೨ ಮೈಲು ಉಳಿದಿದ್ದುವು.

ಲಾರಿ ಚಾಲೂ ಆಗುತ್ತದೆ. ಆದರೆ ಗಿಯರ್ ಹಾಕಲು ಸಾಧ್ಯವಿಲ್ಲ. ಆದ್ದರಿಂದ ಅದು ಓಡುವುದಿಲ್ಲ. ಗಿಯರ್ ಸ್ಟಕ್–ಅಪ್ ಆಯಿತು. ಅಂದರೆ ಗಿಯರ್ ಅಲ್ಲಾಡದ ಕೊರಡಾಯಿತು. ಅನ್ಸಾರಿ, ಲಿಂಗೋಜಿ ಸೇರಿ ಗಿಯರ್ ಪೆಟ್ಟಿಗೆ ಬಿಚ್ಚಿದರು. ಒಳಗೆ ಗಿಯರ್–ಲಿವರ್ ಮುರಿದೇ ಹೋಗಿದೆ. ದೊಡ್ಡದಾಗಿಯೇ ಪೆಟ್ಟು ಹೊಡೆದಿತ್ತು. ಅಲ್ಲಿ ಆಗ ದುರಸ್ತಿಗೊಳಿಸಿ ಹೊರಡುವ ಪರಿಸ್ಥಿತಿ ಅಲ್ಲ. ಮಂಗಳೂರಿನಿಂದಲೇ ಮೆಕಾನಿಕ್ ಬರಬೇಕೋ ಏನೋ. ಉಜಿರೆ ಹತ್ತಿರವೇ ಇದೆಯಷ್ಟೆ. ಅಲ್ಲಿಯೂ ಮೆಕಾನಿಕ್ ಇದ್ದರೆ ಬೇಗನೆ ಸರಿಪಡಿಸಬಹುದು ಎಂಬ ಆಸೆ. ಹೇಗೂ ವೇಳೆಯ ಪ್ರಶ್ನೆ. ಆದ್ದರಿಂದ ಲಿಂಗೋಜಿ ಲಾರಿಯ ಜನ ಮತ್ತು ಸಾಮಾನನ್ನು ಅಲ್ಲಿಯೇ ಬಿಟ್ಟು ಅನ್ಸಾರಿ ಲಾರಿಯನ್ನು ನಾವೂರಿಗೆ ಓಡಿಸಿದೆವು. ಅದರಲ್ಲಿ ದೊರೆಗಳು, ನಾನು, ಶಿವಪ್ಪ, ಖಾನ್ವಿಲ್ಕರ್ ಇದ್ದೆವು. ನಿಸಾರ್, ಕೆಂಡಗಣ್ಣ ಸ್ವಾಮಿ, ಹರೂನ್ ಎಲ್ಲರೂ ಅಲ್ಲಿಯೇ ನಿಂತರು. ಅನ್ಸಾರಿ ಲಾರಿಯ ಹುಡುಗರಿಗೆ ಹೇಗೂ ತಾವು ಬಚಾವು ಎಂಬ ಸಂತೋಷ. ಲಿಂಗೋಜಿಯ ಹುಡುಗರಿಗೆ ದುಃಖ. "ಬೇಗನೆ ಹಿಂದೆ ಬರುತ್ತೇವೆ. ನಿಮ್ಮನ್ನೂ ಕೊಂಡೊಯ್ಯುತ್ತೇವೆ. ಮೊದಲು ಹೋದವರಿಗೆ ಕ್ಯಾಂಪು ಪ್ರಾರಂಭಿಸುವ ಕೆಲಸ ಬೇಕಾದಷ್ಟು ಇರುವುದು. ನೀವಿಲ್ಲಿ ಆರಾಮವಾಗಿದ್ದರಾಯಿತಲ್ಲ" ಎಂದು ಸಮಾಧಾನ ಹೇಳಿ ನಾವು ಮುಂದುವರಿದೆವು. ದೊರೆಗಳು (ತಾತ) ಧರ್ಮಸ್ಥಳದಲ್ಲಿ ಪ್ರಾರ್ಥನೆ ಮಾಡಿಯೂ ಹೀಗಾಯಿತಲ್ಲ ಎಂದು ಸ್ವಾಮಿಯವರು ಒಂದು ಚುಟುಕ ಗೀಚಿದರು:

ಧರ್ಮಸ್ಥಳದ ಮಂಜ್ನಾಥಾ
ಕಾಪಾಡಪ್ಪಾ ಅನವರತಾ!
ಅಂದ್ಕಂಡ್ ಹೊರಟ್ರೆ ನಮ್ತಾತಾ
ಲಾರೀ ಕೊಟ್ತು ದೊಡ್ಲಾತಾ

# ನಾವೂರಿನ ತಳ ಶಿಬಿರ

**ಅಧ್ಯಾಯ ಹದಿನಾಲ್ಕು**

ನಾವು ಧೂಳಿನ ಕಿರುದಾರಿಯಾಗಿ ಹೋಗಿ ನಾವೂರನ್ನು ತಲಪಿದಾಗ ಸಾಯಂಕಾಲದ ೫ ಗಂಟೆಯಾಗಿತ್ತು.

ಯಾವೂರು? ನಾವೂರು! ಊರೆಲ್ಲಿ ಬಂತು. ಕುದುರೆಮುಖ ಶ್ರೇಣಿಯ ಬುಡದ ತಪ್ಪಲು ಪ್ರದೇಶ. ನಡು ಮಧ್ಯಾಹ್ನವೂ ಬೆಟ್ಟದ ಕಾಡುಗಳ ಮರೆಯಲ್ಲಿರುವ ಈ 'ಊರಿ'ನಲ್ಲಿ ಕತ್ತಲು. ಇನ್ನು ಊರೆಂದರೆ ಅಲ್ಲಿದ್ದ ಅರಣ್ಯ ಇಲಾಖೆಯ ನಿರ್ಜನ ಪ್ರವಾಸಿ ಮಂದಿರ ಒಂದೇ. ಅದರಿಂದ ಆರೇಳು ಫರ್ಲಾಂಗ್ ದೂರದಲ್ಲಿ ಬಯಲಿನಲ್ಲಿ ಹರಡಿದ್ದ ನಾಲ್ಕೈದು ಗುಡಿಸಲುಗಳು. ಇಂಗ್ಲಿಷ್ ಹೆಸರು ಕೇಳಿ ಸುಂದರ ಪ್ರವಾಸೀ ಮಂದಿರ, ಆಧುನಿಕ ನಲ್ಲಿ ನೀರಿನ ಸೌಕರ್ಯ, ವಾಷ್ ಬೇಸಿನ್, ವಿದ್ಯುದ್ದೀಪಗಳ ಮೆರುಗು, ಬಟ್ಲರುಗಳ ಸಮೂಹ ಎಂದೆಲ್ಲ ಯೋಚಿಸಿದರೆ ಕುದುರೆಮುಖ ಕೆನೆದೀತು, ನಿಮಗೇನೂ ಅನುಭವವಿಲ್ಲವೆಂದು. ಹಳ್ಳಿಯವರ ಸರಳ ಭಾಷೆಯಲ್ಲಿ ಹಂಚು ಹಾಕಿದ ಮನೆ ಬಂಗ್ಲೆ. ಆದ್ದರಿಂದ ನಾವೂರಿನ ಈ ಕಟ್ಟಡ ಬಂಗ್ಲೆ. ಹಿಂದಿನ ಕಾಲದಲ್ಲಿ ಸಾರಿಗೆ ಸಂಪರ್ಕ ತೀರ ಕಡಿಮೆ ಇದ್ದಾಗ ಬೆಳ್ತಂಗಡಿಯಿಂದ ನಾವೂರಿಗೆ ಒಂದು ದಿವಸದಲ್ಲಿ ಹೋಗಿ ಕೆಲಸ ಮುಗಿಸಿ ಮರಳುವುದು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ನಾವೂರಿನಲ್ಲಿಯೇ ಠಾಣ್ಯ ಹೂಡುವುದು ಅವಶ್ಯವಾಗುತ್ತಿತ್ತು. ಅರಣ್ಯ ಇಲಾಖೆಯ ಅಧಿಕಾರಿಗಳ ತಾತ್ಕಾಲಿಕ ತಂಗುದಾಣವಿದು. ಆದ್ದರಿಂದ ಒಂದು ಕಾಲದಲ್ಲಿ ವೈಭವದಿಂದ ಮೆರೆದಿರಬಹುದಾದ ಈ ದೊಡ್ಡ ಹಂಚಿನ ಮನೆ (ಬಂಗ್ಲೆ) ಇಂದು ಹಾಳು ಹಾಳುಗರೆಯುತ್ತಿತ್ತು:

ಅರೆಮುರಿದು ಒರಗಿಹವು ಗುಡಿಸಲುಗಳೆಲ್ಲ<br>ಸರಿಮಾಡಿ ಹುಲ್ಲು ಹೊದಿಸುವವರೊಬ್ಬರಿಲ್ಲ<br>**– ಕುವೆಂಪು –**

ನಾವು ಡಿಸೆಂಬರಿನಲ್ಲಿ ಸ್ಥಳ ಪರಿಶೀಲನೆಗಾಗಿ ಬಂದಿದ್ದಾಗ ಇಲ್ಲಿ ಯಾರೂ ಇರಲಿಲ್ಲ. ಆದರೂ ಬಾಗಿಲುಗಳ ಚಿಲಕ ಭದ್ರವಾಗಿ ಹಾಕಿ ಬೀಗಗಳು ಜಡಿಯಲ್ಪಟ್ಟಿದ್ದುವು. ಒಂದೆರಡು ದಶಕಗಳ ತುಕ್ಕು, ಗೆದ್ದಲು ಅಲ್ಲೆಲ್ಲ ವ್ಯಾಪಿಸಿದ್ದುವು. ಬಾಗಿಲನ್ನು ಮುಟ್ಟುವುದೇ ತಡ ಅರೆಬಿಯನ್ ನೈಟ್ಸ್ ಕತೆಯಲ್ಲಿ ಕುಪ್ಪಿಯ ದಿಮ್ಮಿ ತೆಗೆದೊಡನೆ ಬೃಹದಾಕಾರದ ಭಯಂಕರ ರಾಕ್ಷಸ – ಜಿನ್ನೈ, ನೆಗೆಯುವಂತೆ ಕದದ ಹಲಗೆ ಮುರಿದು ಬಿತ್ತು. ಶಿಶುನಾಳ ಶರೀಫರು ಹಾಡಿದಂತೆ

ಮುರುಕು ಜಂತಿ ಹುಳುಕು ತೊಲೆಯು<br>ಮುರಿದು ಕೊರಿದು ಕೀಲಸಂದು<br>ಮುರಕಚಪ್ಪರ ಜೇರುಗಿಂಡಿ<br>ಮೇಲಕೇರಿ ಮೆಟ್ಟಲಾರೆ<br>ಸೋರುತಿಹುದು ಮನೆಯಮಾಳಿಗೆ ಅಜ್ಞಾನದಿಂದ

ಒಳಗೆ ಹಿಂದಿನ ಶತಮಾನದ ನಾಲ್ಕೆಂಟು ಮೇಜು, ಕುರ್ಚಿ, ಮೇಲೆ ಜೋಲುತ್ತಿದ್ದ ಪಂಖಾ, ಒಂದಿಂಚು ದಪ್ಪದ ಧೂಳು ಕಾಲಿಟ್ಟಲ್ಲೆಲ್ಲ. ಗೋಡೆಯ ಮೇಲೆ ಆಧುನಿಕ ಚಿತ್ರಕಲೆಯನ್ನು ಗೆದ್ದಲು ಹುಳುಗಳು ಕೊರೆದಿದ್ದುವು. ಜೇಡರ ಹುಳುಗಳ ತಂತಿಗಳು ಅಖಂಡವಾಗಿ ಹೆಣೆದುಕೊಂಡಿದ್ದುವು. ಮಾಡಿನ ಹಂಚುಗಳು ಒಂದು ಕಾಲದಲ್ಲಿ ಬಿಡಿಬಿಡಿಯಾಗಿ ಜೋಡಿಸಲ್ಪಟ್ಟಿದ್ದರೂ ಮಳೆಬಿಸಿಲು ಅವುಗಳ ಮೇಲೆ ಬಿದ್ದು ಪಾಚಿ, ಕಸ, ಧೂಳು ಮುಂತಾದವುಗಳ ಅಖಂಡ ಲೇಪ ಅವುಗಳಿಗೆ ಹಚ್ಚಿದಂತಾಗಿ ಇಡಿಯ ಮಾಡೇ ಮಸಿಯ ಒಂದು ಹಲಗೆಯಾಗಿತ್ತು. ಹೀಗೆ ಎರಕಗೊಂಡ ಆ ಹಂಚುಗಳ 'ಹಲಗೆ' ಕೆಳಗಿನ ಬಾರಿಪಟ್ಟಿ, ಪಕಾಸು, ದಾರವಂದಗಳನ್ನು ಭದ್ರವಾಗಿ ಹಿಡಿದಿತ್ತು. ಏಕೆಂದರೆ ಮರದ ಬಹ್ವಂಶ ಒಂದೋ (ಗೆದ್ದಲೆ ತಿಂದು) ಕುಷ್ಠರೋಗಗ್ರಸ್ತವಾಗಿತ್ತು, ಇಲ್ಲ ಮಾಯವಾಗಿತ್ತು. ಕಾಡಿನ ಬುಡವಾದರೂ ಕದಿವವನಿಗೆ ಕೈಗೆ ಸಿಕ್ಕಿದ ಬಾರಿಪಟ್ಟಿ, ಕೊಯ್ದು ಮರ ಕೈಯಲ್ಲಿರುವ ಒಂದು ಹಕ್ಕಿಯಂತೆ, ಕಾಡಿನ ಪೊದೆಯಲ್ಲಿರಬಹುದಾದ ಎರಡು ಹಕ್ಕಿಗಳ ಆಸೆ ಅವನಿಗಿಲ್ಲ. ನಮ್ಮ ಈ 'ಪ್ರಥಮ ಚುಂಬನ'ದ ಅನುಭವದಿಂದ ಒಂದು ಸಂಗತಿ ನಿರ್ಧರಿಸಿದ್ದೆವು – ಬಂಗ್ಲೆ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಅಪ್ರವೇಶ್ಯ – out of bounds. ಈ ಬಂಗ್ಲೆಗೆ ಒಂದು ಔಟ್ ಹೌಸೂ ಉಂಟು! ಪೀಸಾನಗರದ ವಾಲುಗೋಪುರವನ್ನೇ ಥೇಟ್ ಮೀರಿಸುವಂತಿದ್ದ ಇದರ ಗೋಡೆಗಳು ಮಾಡಿನ ಆಧಾರದಿಂದಲೇ ಒತ್ತಟ್ಟಿಗೆ ನಿಂತಿದ್ದುವು. ನೀರಿನ ಆಸರೆ ಅಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿ – ಬೆಟ್ಟದಿಂದ ಹರಿದು ಬರುತ್ತಿದ್ದ ಝರಿ. ಫೆಬ್ರುವರಿ ಮಾರ್ಚ್ ತನಕವೂ ಅದು ಆರಲಾರದೆಂದು ಊಹಿಸಿದ್ದೆವು. ಆದರೆ ಅದರ ಪಕ್ಕದಲ್ಲಿ ಶಿಬಿರ ಹೂಡಲು ಸರಿಯಾದ ಸ್ಥಳವಿರಲಿಲ್ಲ. ಹೀಗಾಗಿ ಬಂಗ್ಲೆಯ ಅಂಗಳದಲ್ಲಿ ಶಿಬಿರ, ನೀರನ್ನು ಝರಿಯಿಂದ ಹೊತ್ತು ತರುವುದು ಎಂದು ನಮ್ಮ ಪೂರ್ವ ಯೋಜನೆಯಿತ್ತು. ಡಿಸೆಂಬರಿನಲ್ಲಿ ನಾವು ಬಂಗ್ಲೆಯ ಪರಿಶೀಲನೆಯಿಂದ ಮರಳಿದ ಅನಂತರ

ಅರಣ್ಯ ಇಲಾಖೆಯ ಅಧಿಕಾರಿಗಳಿಗೆ ಅದರ ಸ್ಥಿತಿಯನ್ನು ಕುರಿತು ಪತ್ರ ಬರೆದಿದ್ದೆವು. ಮತ್ತು ಸಾಧ್ಯವಾದರೆ ಅದನ್ನು ದುರಸ್ತಿಗೊಳಿಸಬೇಕೆಂದೂ ಕೋರಿದ್ದೆವು.

ಬಂಗ್ಲೆಯ ಹಿಂದೆ ಅನ್ಸಾರಿ ನಿಂತ: ನಾವೆಲ್ಲ ಲಾರಿಯಿಂದ ದುಮುಕಿದೆವು. ನಮ್ಮನ್ನು ಸ್ವಾಗತಿಸಲು ಯಾರೂ ಇಲ್ಲ. ಕಾಡು ಹಾಳುಗರೆಯುತ್ತಿತ್ತು. ನಮ್ಮ ಕೆಲಸವನ್ನು ನಾವೇ ಮಾಡಬೇಕು. ಒಂದಿಷ್ಟು ಟೀ ಕಾಸೋಣವೆಂದರೆ ಚಹಾ ಪುಡಿಯೂ ಅಡುಗೆಯವರೂ ಲಿಂಗೋಜಿ ಲಾರಿಯಲ್ಲಿ. ಸಕ್ಕರೆ ಮಾತ್ರ ಈ ಲಾರಿಯಲ್ಲಿ. ಇನ್ನು ಅವರು ಬಂದ ಮೇಲೆಯೇ ಮುಂದಿನ ದಾರಿ. ನೀರು ತಂದು ಕುಡಿಯೋಣವೆಂದರೆ ಬಕೆಟುಗಳೆಲ್ಲ ಆಚೆ ಲಾರಿಯೊಳಗೆ. ಧರ್ಮಸ್ಥಳದಾ ಮಂಜ್ನಾಥಾ, ಕಾಪಾಡಪ್ಪಾ ಅನವರತಾ! ಉಳಿದ ದಾರಿಯೊಂದೇ – ಆದಷ್ಟು ಬೇಗ ಅನ್ಸಾರಿಯನ್ನು ಹಿಂದಿರುಗಿಸಿಕೊಂಡು ಹೋಗಿ ಅವರೆಲ್ಲರನ್ನು ತರುವುದು.

ಮೆಂಗಿಲ ಶೇಣವ ಎನ್ನುವ ಸ್ಥಳೀಯನೊಬ್ಬನ ಮನೆಯ ದಾರಿಯನ್ನು ತೋರಿಸಿ ಅವನನ್ನು ಕರೆತರಲು ಹುಡುಗರನ್ನು ಕಳಿಸಿಯಾಯ್ತು. ನಾನು ಅನ್ಸಾರಿ ಲಾರಿಯಲ್ಲಿ ಹಿಂದಕ್ಕೆ ಹೊರಟೆ. ದೊರೆಗಳೂ ಡಾಕ್ಟರರೂ ಶಿಬಿರದಲ್ಲಿಯೇ ಉಳಿದರು. ಲಿಂಗೋಜಿ ಲಾರಿಯಿದ್ದ ಸ್ಥಳವನ್ನು ನಾನು ತಲಪಿದಾಗ ಸಂಜೆ ೭ ಗಂಟೆಯಾಗಿತ್ತು. ಸುಮಾರು ಮೂರು ಗಂಟೆಗಳ ಕಾಲ ಅವರೆಲ್ಲರೂ ಆ ಮಾರ್ಗ ಮಧ್ಯೆ ಗಾಳಿಗೋಳಗಳನ್ನು ಹಾರಿಸುತ್ತ ಕಾಲ ಕಳೆದಿದ್ದರು. ನಾನು ತಲಪಿದೊಡನೆಯೇ ಹುಡುಗರ ಕೂಡಿಟ್ಟಿದ್ದ ಹತಾಶೆ, ಆಯಾಸ ಪ್ರವಾಹ ಕಟ್ಟೆಯೊಡೆದು ಹರಿದುವು. ಉದ್ದುದ್ದ ಮೋರೆ ಮಾಡಿ ಗೋಗರೆದರು. ತಪ್ಪು ನನ್ನದೆಂದು ಅದರ ಅರ್ಥವಲ್ಲ. ಕೇಳುವವನು ನಾನಿದ್ದೇನೆಂದು ಇಂಗಿತ. "ಇದೂ ಶಿಕ್ಷಣದ ಒಂದಂಗವೆಂದು ತಿಳಿಯಬೇಕು. ನೀವು ಮೊದಲೇ ಅಲ್ಲಿಗೆ ಹೋಗಿ ಏನು ಪಟೇಲ್ತಿಕೆ ಮಾಡಬೇಕಿತ್ತೇ? ಅದಿರಲಿ – ಮಾರ್ಗಮಧ್ಯೆ ಬಿಸಿಲಿನ ತಂಪು ಕೃಪೆಯಲ್ಲಿ ಕಲ್ಪನೆಯನ್ನು ಅದುಮಿಟ್ಟು ಶೂನ್ಯವಾಗಿ ದಿಗಂತವನ್ನು ನೋಡುವ ಅನುಭವ ಬೇಕೆಂದರೂ ಲಭಿಸೀತೇ?" ಎಂದು ನಾನು ಪಾಟೀಸವಾಲು ಹಾಕಿದೆ.
"ಬೆಂಗಳೂರು ಸಿಟಿ ಬಸ್ ಕಾಯುವಾಗ, ಸರ್?"
"ಆದರೆ ಅಲ್ಲಿ ದಿಗಂತವೆಂದರೆ ಮುಂದಿನ ಮನೆಯ ಕಕ್ಕಟ್ಟು ಅಥವಾ ಹೆಚ್ಚೆಂದರೆ ಅದರೊಳಗಿರುವ..."
ನಗೆಗಡಲು ಮೊಗೆಯಿತು. ಸ್ವಾಮಿಯವರ ಪ್ರತಿಭೆ ಮಿಂಚಿತು:

ಒಂದು ಲಾರಿಯು ದೂರ ಸಾಗಿರಲು ಮುಂದೆ
ಕೆಲಸವಿಲ್ಲದೆ ಕುಳಿತೆ ನಾನಿಲ್ಲೆ ಹಿಂದೆ
ಕೇಪಳೆಯ ಹಣ್ಣು ಮುರಕಲ್ಲಿನಾ ಮಣ್ಣು
ನೋಡ ಸಾಲದು ನಮ್ಮ ಒಂದು ಜತೆ ಕಣ್ಣು!

ಲಾರಿಗಳ ಬೆನ್ನು ಬೆನ್ನುಗಳನ್ನು ಸೇರಿಸಿದೆವು. ಲಿಂಗೋಜಿಯು ಅನ್ಸಾರಿಗೆ ವರ್ಗವಾದ. ಹುಡುಗರೆಲ್ಲರೂ ಅನ್ಸಾರಿ ಲಾರಿಯಲ್ಲಿ. ಇದಕ್ಕೆ ಲಿಂಗೋಜಿ ಲಾರಿಯನ್ನು ಕಟ್ಟಿ ಮಂದಗಮನದಿಂದ ಮುಂದೆ ಸುಂದರಾಂಗರ ಮೆರವಣಿಗೆ ಮೆರೆಯಿತು. ಐದಾರು ಮೈಲು ದೂರದ ಬೆಳ್ತಂಗಡಿ ತಲಪುವಾಗ ಕತ್ತಲೆ ಪೂರ್ಣ ಕವಿದಿತ್ತು. ಅಲ್ಲಿದ್ದ 'ಜಗತ್ಪ್ರಸಿದ್ಧ' ವರ್ಕ್‌ಷಾಪಿನಲ್ಲಿ ಅಥವಾ ಲಾರೀ ದವಖಾನೆಯಲ್ಲಿ ಲಿಂಗೋಜಿ ಲಾರಿ, ಲಿಂಗೋಜಿ, ಹರೂನ್ ಇವರನ್ನು ಬಿಟ್ಟು ಉಳಿದವರು ನಾವೂರಿನೆಡೆಗೆ ಹೊರಟೆವು. ಅಷ್ಟರಲ್ಲಿ ಅಲ್ಲಿಗೆ ದೊರೆಗಳು (ನಾವೂರಿನಿಂದ ೭ ಮೈಲಿದೆ) ಯಾರದೋ ಕಾರಿನಲ್ಲಿ ಬಂದರು. ಅವರು ಪೋಸ್ಟಾಫೀಸಿನಲ್ಲಿ ತಮ್ಮ ತಂದೆಯವರ ಆರೋಗ್ಯ, ಶ್ರೀಮತಿ ನಿಸಾರರ ಆರೋಗ್ಯ ಮುಂತಾದ ವಿವರ ಸಂಗ್ರಹಿಸಿಡಲು ಬೇಕಾದ ಏರ್ಪಾಡು ಮಾಡಿ ನಮ್ಮ ಲಾರಿಯನ್ನೇರಿದರು.

"ನೀನು ಇಷ್ಟು ತಡಮಾಡಬಾರದಿತ್ತು. ಲಿಂಗೋಜಿಯನ್ನು ಅಲ್ಲಿಯೇ ಬಿಟ್ಟು ಹುಡುಗರನ್ನು ಮೊದಲು ಸಾಗಿಸಿಬಿಡಬೇಕಾಗಿತ್ತು" ಅವರೆಂದರು.
"ಸರಿಯೇ. ಆದರೆ ಲಿಂಗೋಜಿಯ ಅವಸ್ಥೆ?"
"ಪುನಃ ಅನ್ಸಾರಿಯನ್ನು ಓಡಿಸಬಹುದಿತ್ತು."
"ಒಂದರ್ಧ ಗಂಟೆಯ ಉಳಿತಾಯಕ್ಕಾಗಿ ಎಷ್ಟು ಪೆಟ್ರೋಲ್ ಖರ್ಚು. ಅಲ್ಲದೇ ಅಷ್ಟು ಬೇಗ ಹೋಗಿ ಇವರು ಮಾಡುವುದಾದರೂ ಏನು? ನಮ್ಮ ಹಾಗೆ ತಾನೇ?" ನಾನೊಪ್ಪಲಿಲ್ಲ. "ಇಲ್ಲ, ಹುಡುಗರು ನಮ್ಮ ಹಾಗಲ್ಲ. ಬಲು ಕೋಮಲ. ಶ್ರಮ, ತಾಪ ವಿಪರೀತವಾಗಿರುವಾಗ ಒಂದೊಂದು ನಿಮಿಷವೂ ಯುಗದಂತಾಗುವುದು. ಹೊಣೆ ಹೊತ್ತವರಿಗೆ ಅದರ ಭಾರದಿಂದಾಗಿ ಇದು ಗೊತ್ತಾಗುವುದಿಲ್ಲ. ಆದರೆ ಹೊರದ ಹುಡುಗರಿಗೆ ಇದು ಅಸಹನೀಯವಾಗುವುದು." "ಸರಿ, ಮುಂದಿನ ತಿಳುವಳಿಕೆಗಾಯಿತು" ಎಂದು ನಾನು ಮುಗಿಸಿದೆ. Noted for future guidance! ಅವರೆಂದದ್ದು ಎಷ್ಟು ಸರಿಯೋ ನಾನು ಮಾಡಿದ್ದೂ ಅಷ್ಟೇ ಸರಿ ಎಂದು ತಿಳಿದಿದ್ದೇನೆ. ಯಾವ ಇಬ್ಬರು ವ್ಯಕ್ತಿಗಳೂ ಒಂದೇ ವಿಷಯ ಕುರಿತು ಏಕಪ್ರಕಾರ ಅಭಿಪ್ರಾಯ ನೀಡುವುದು ಸಾಧ್ಯವಿಲ್ಲ. ಹೀಗೆ ಮಾತು, ವಾದ, ನಗು ಮುಂದುವರಿದಂತೆ ಲಾರಿ ನಾವೂರು ಬಂಗ್ಲೆಯನ್ನು ಪುನಃ ಪ್ರವೇಶಿಸಿತು. ದೊರೆಗಳೆಂದರು, "ಒಂದು ಹೇಳಲು ಮರೆತುಬಿಟ್ಟಿದ್ದೆ. ಫಾರೆಸ್ಟ್ ಡಿಪಾರ್ಟ್‌ಮೆಂಟಿನವರು ಬಂಗ್ಲೆ ಮತ್ತು

ಔಟ್‌ಹೌಸ್‌ಗಳನ್ನು ರಿಪೇರಿ ಮಾಡಿಸಿದ್ದಾರೆ. ಅವು ಈಗ ಅಪಾಯರಹಿತವಾಗಿದೆ. ಆದರೆ ನೀರಿನ ಸಮಸ್ಯೆ ಪ್ರಬಲವಾಗಿದೆ. ಡಿಸೆಂಬರಿನಲ್ಲಿ ಹರಿಯುತ್ತಿದ್ದ ಕಿರು ತೊರೆ ಈಗ ಹನಿ ಹನಿ ತೊಟ್ಟಿಕ್ಕುತ್ತಿದೆ. ಅದರ ದಾರಿಯಲ್ಲಿ ಸ್ವಲ್ಪ ಮೇಲೆ ಹೋಗಿ ಗುಂಡಿ ತೋಡಿ ನಾವು ಕುಡಿಯುವ ನೀರು ಸಂಗ್ರಹಿಸಬೇಕು. ಬೇರೆ ಉಪಾಯವಿಲ್ಲ. ಅಲ್ಲಿಂದ ಇಲ್ಲಿಗೆ ಹೊತ್ತು ತರುವುದು ಪ್ರಯಾಸಕರವಾದರೂ ಹುಡುಗರಿರುವುದರಿಂದ ಈ ಸಮಸ್ಯೆ ನಿವಾರಿಸಬಹುದು. ಆದರೆ ನೀರು ಸಂಗ್ರಹಿಸಿಡಲು ದೊಡ್ಡ ಬಾನಿಯೇ ಇಲ್ಲವಲ್ಲ?"

ಇದು ಹೇಗೆಯೇ ಇರಲಿ. ನಾವೂರು ಬಂಗ್ಲೆ ಆಗ ಅತಿ ಸಂಭ್ರಮದ ಚಟುವಟಿಕೆಯ ಜೇನುಗೂಡಾಗಿತ್ತು. ಗ್ಯಾಸ್ ಲೈಟ್‌ಗಳು, ಲಾಂದ್ರಗಳು, ಟಾರ್ಚ್ ಲೈಟುಗಳು ಅಲ್ಲಿ ಬೆಳಕಿನ ಹೊನಲು ಹರಿಸಿದುವು. ಹುಡುಗರ ಒಂದು ತಂಡ ನೀರು ತಂದಿತು. ಇನ್ನೊಂದು ಸೌದೆ ಆಯ್ದಿತು. ಮತ್ತೊಂದು ಸಾಮಾನು ಸರಂಜಾಮುಗಳನ್ನು ಔಟ್ ಹೌಸಿನಲ್ಲಿ ಶೇಖರಿಸಿ ವ್ಯವಸ್ಥಿತವಾಗಿ ಜೋಡಿಸುವ ಜಂಬ್ರದಲ್ಲಿ ಜಾಂಬ್ರೆ ಮತ್ತು ಖಾನ್ವಿಲ್ಕರರಿಗೆ ಸಹಾಯ ಮಾಡಿತು. ಅಡುಗೆಯವರು ಪುಟ ನೆಗೆಯುತ್ತಿದ್ದ ರಬ್ಬರ್ ಚಂಡಿನಂತೆ. ಲಾರಿಯಿಂದಿಳಿದ ಅರ್ಧ ಗಂಟೆಯ ಒಳಗೆಏ ಅವರು ಟೀ, ಅವಲಕ್ಕಿ ಉಪ್ಪುಕರಿಯನ್ನು ತಯಾರು ಮಾಡಿ ಹಂಚಿಯೇ ಬಿಟ್ಟರು. ಅಮೃತ ಹೇಗುಂಟೋ ನನಗೆ ಗೊತ್ತಿಲ್ಲ. ಆದರೆ ಅದು ನಾವೂರಿನ ಈ ಪ್ರಥಮ ಟೀಗಿಂತ ಹೆಚ್ಚು ರುಚಿಕರವಾಗಿದ್ದಿರಲಾರದು ಎಂದು ನಂಬಿದ್ದೇನೆ. ಇನ್ನು ರತ್ನ ಹೇಳಿದಂತೆ ಆ ಗಳಿಗೆಯನ್ನು ಪರಮಾತ್ಮ ನನ್ನೆದುರು ಬಂದು ನಿಂತು, "ನಿನಗೆ ಚಿರಂಜೀವಿತ್ವ ನೀಡುವ ಆದರೆ ಕಹಿಯಾದ ಅಮೃತ ಸಾಕೋ ಅಥವಾ ನಾವೂರಿನ ಈ ಮರ್ತ್ಯ ಟೀ ಸಾಕೋ?" ಎಂದು ಪ್ರಶ್ನಿಸಿದರೆ "ಹೋಗಯ್ಯಾ, ಹೋಗು ಟೀನೇ ಸಾಕು. ನಿನ್ನಮೃತ ಮೃತವಾಗಲಿ" ಎಂದು ನಾನು ಮಾತ್ರವಲ್ಲ ನಾವೆಲ್ಲರೂ ಏಕ ಕಂಠದಿಂದ ಒದರಿ ಬಿಡುತ್ತಿದ್ದೆವು. ಹೊಟ್ಟೆಯ ಒಳಗೆ ಖಾರದ ಅವಲಕ್ಕಿಯ ಟೈಮ್ ಬಾಂಬೂ ಸುಮಧುರ ಟೀಯ ಹೈಡ್ರೋಜನ್ ಬಾಂಬೂ ಏಕ ಕಾಲದಲ್ಲಿ ಕೆಲಸ ಮಾಡಿ ಚೈತನ್ಯದ್ವಯವನ್ನು ಪ್ರವಹಿಸಿದುವು. ರಾತ್ರಿ ೯ ಗಂಟೆ ಆಗಲೇ ಆಗಿದ್ದರೂ ನಮಗೆ ಆಗ ಮುಗಿದದ್ದು ಸಾಯಂಕಾಲದ ಟೀ ಅಷ್ಟೆ. ಊಟದ ಏರ್ಪಾಡು ಭರದಿಂದ ಸಾಗಿತು.

ಡಾಕ್ಟರ್ ಪೂಜಾರರು ಬಲು ಸುಟಿ ತರುಣ. ಎಂಬಿಬಿಎಸ್ ಡಿಗ್ರಿಧರರಾಗಿ ಮುಂದಿನ ಎಂಎಸ್ ಪದವಿ ಓದುತ್ತಿದ್ದ ಸರ್ಕಾರೀ ವೈದ್ಯ. ಅವರು ನೀರನ್ನು ಕೂಲಂಕಷವಾಗಿ ಪರಿಶೀಲಿಸಿ, "ಈ ನೀರನ್ನು ಕುದಿಸಿ, ಸೋಸಿ ಕುಡಿಯಬೇಕು. ಬರಿಯ ಬ್ಲೀಚಿಂಗ್ ಪೌಡರ್ ಹಾಕಿದರೆ ಸಾಲದು. ಹಾಗೇ ಕುಡಿದರೆ ಡಿಸೆಂಟ್ರಿ ಬರಬಹುದು" ಎಂದರು. ಇದನ್ನು ಕೇಳಿದ ಅತ್ಯುತ್ಸಾಹಿ ಜಗನ್ನಾಥ ಶಾಸ್ತ್ರಿ, "ಸಾರ್! ತೋಡಿನ ಮೇಲೆ ಬೆಂಕಿ ಹಾಕಿಬಿಡೋಣ. ಆಗ ಕುದ್ದ ನೀರೇ ನಮಗೆ ಸಿಗುವುದಷ್ಟೆ" ಎಂಬ ಶಾಸ್ತ್ರೀಯ ಸೂಚನೆ ನೀಡಿದ. "ಆಗ ತೋಡಿನಲ್ಲಿರುವ ಮೀನುಗಳ ಪಾಡು?" ಗುರು ಕೇಳಿದ. "ಮರ ಹತ್ತಿಬಿಡುತ್ತವೆ ಕಾಣಮ್ಮ" ಶ್ರೀನಿವಾಸ ಕೂಡಿಸಿದ. "ಮರ ಹತ್ತಲು ಅವೇನು ಎಮ್ಮೆ ಕರುಗಳೇ?" ನಾನು ಮುಗಿಸಿದೆ. ಕುಡಿಯುವ ನೀರಂತೂ ಹೇಗೋ ಆಗುವುದು. ಆದರೆ ಸ್ನಾನ ಮಾಡಲು? ಬೆಂಗಳೂರಿನ ತಂಪಿನಿಂದ ಬಂದ ಹಸುಗೂಸುಗಳು ನಾವೂರಿನ ಸೆಕೆಯಿಂದ ಚಂಡಿಪಿಂಡಿಯಾಗಿ ಕಂಗಾಲಾಗಿದ್ದರು. ಬಾಬಾ, ಶ್ರೀಧರನ್, ಲಕ್ಷ್ಮಿ ಮೊದಲಾದವರು ಸೇರಿ ಶಿಬಿರಾಗ್ನಿಯನ್ನು ಭರದಿಂದ ಸಿದ್ಧಗೊಳಿಸಿದರು. ವಿಶಾಲವಾದ ಅಂಗಳವಿದೆ. ಬಂಗ್ಲೆಯ ಚಾವಡಿಯ ಮುಂದೆ ಗುಂಡಿ ತೋಡಿ ಮರದ ಭಾರೀ ಕಾಂಡಗಳನ್ನು ಒಟ್ಟಿದರು. ಅದೊಂದು ಗೋಪುರಾಕೃತಿಗೆ ಬಂದು ಎಲ್ಲವೂ ತಯಾರಾದೊಡನೆಯೇ ದೊರೆಗಳನ್ನು ವಿಧಿ, ಮಂತ್ರ, ತಂತ್ರಪೂರ್ವಕ ಅಲ್ಲಿಗೆ ಆಮಂತ್ರಿಸಲಾಯಿತು. ಅವರು ಸಾಂಕೇತಿಕವಾಗಿ ಅದಕ್ಕೆ ಅಗ್ನಿ ಸ್ಪರ್ಶಿಸುವುದರ ಮೂಲಕ ಶಿಬಿರಾಗ್ನಿಯನ್ನು ಅಧಿಕೃತವಾಗಿ ಉದ್ಘಾಟಿಸಿದರು. ಅಲ್ಲಿ ಭಾಷಣ ಆಲಿಸುವ (ಕೇಳುವವರು ಸಹಿಸಲೇಬೇಕಾದ) ಮೂಕಸಂಕಟವಿಲ್ಲ. ಆದರೆ ಆಶು ಭಾಷಣದ ಮುಗ್ಧತೆ, ಸೌಂದರ್ಯ ಇದ್ದುವು. ಭಾಷಣಕಾರರು, ನರ್ತನಕಾರರು ಹುಡುಗರೇ. ಕೇಳುವವರು ನಾವೆಲ್ಲ. "ನೋಟಕರುಂ ಆಟಕರೇ!" ಉತ್ಸಾಹ ಮೂಡಿದರೆ ನಾವೂ ಅವರೊಡನೆ ಅವರಂತೆ ಹಾಡು ಅರಚುತ್ತ ನಲಿಯಬಹುದು. ದಿನದ ಶಿಸ್ತಿನ ಬಿಗಿಯಿಂದ ಬಿಸಿಗೊಂಡ ದೇಹಯಂತ್ರಕ್ಕೆ ಇದೊಂದು ಬಗೆಯ ತೈಲಾಭ್ಯಂಜನ. ಕೀಲುಗಳು ನಗುವೆಂಬ ಹೆರೆಯೆಣ್ಣೆಯಿಂದ ಸಡಿಲಗೊಂಡು ಹಗುರವಾಗಿ, ಯಂತ್ರ ಮರುದಿವಸದ ಕಾರ್ಯಕ್ಕೆ ಮೊದಲಿನ ಲವಲವಿಕೆಯಿಂದ ಪುನಃ ಸಿದ್ಧವಾಗುವುದು. ದೊಡ್ಡವರಾದ ನಮಗೆ ಆಗ ಪ್ರಾಯದ ಹೊಣೆಗಾರಿಕೆಯ ಭಾರವನ್ನು ಮರೆತು ಹಗುರಾಗಿ ಎಳೆಯರಾಗಿ ನಲಿಯುವ ಸೌಕರ್ಯವಿದೆ.

ತಾಳ್ಯಾಕ ತಂತ್ಯಾಕ  
ರಾಗದ ಚಿಂತ್ಯಾಕ  
ಹೆಜ್ಜ್ಯಾಗ ಗೆಜ್ಜ್ಯಾಗ  
ಕುಣಿಯೋಣು ಬಾರಾ ಕುಣಿಯೋಣು ಬಾ!

**– ಅಂಬಿಕಾತನಯದತ್ತ –**

# ಮೆಂಗಿಲ ಶೇಣವ

## ಅಧ್ಯಾಯ ಹದಿನೈದು

ಶಿಬಿರಾಗ್ನಿಯ ಭೀಕರ ಕೆನ್ನಾಲಗೆಯ ಕುಣಿತ. ಕಿಡಿಗಳು ಲಟಪಟನೆ ಚಟಾಯಿಸಿ ಅಂತರಿಕ್ಷಕ್ಕೆ ನೆಗೆದು ಅಲ್ಲಿ ಸಿಕ್ಕಿಹಾಕಿಕೊಂಡು ನಕ್ಷತ್ರಗಳಾಗುವ ಸೊಗಸು, ಹುಡುಗರ ಹಾರಾಟ, ಸಂತೋಷದ ಕೇಕೆಗಳು. ಅಲ್ಲಿ ಹುಡುಗರೊಡನೆ ಹುಡುಗನಾಗಿ ಬೆರೆತು ಕುಣಿದು ನಲಿಯುತ್ತಿರುವ ಈ ಅಜ್ಜನಾರು? ಕಾಲಿಗೆ ತುಳುನಾಡಿನ ಮೆಟ್ಟು, ಮೊಳಕಾಲಿನಿಂದ ಮೇಲೆ ಎತ್ತಿ ಕಟ್ಟಿರುವ ಬೈರಾಸು. ಮೈಮೇಲೊಂದು ಜುಬ್ಬ. ತಲೆಗೆ ಕೆಂಪು ಎಲೆವಸ್ತ್ರದ ಮುಂಡಾಸು. ಕೈಗೆ ಆಧಾರವಾಗಿ ಊರುಗೋಲು. ಬಚ್ಚಬಾಯಿಯನ್ನು ಮುಚ್ಚುವ, ಮುಖದ ಮೇಲೆದ್ದು ಕಾಣುವ ಬಿಳಿಯ ಹುಲಿ ಮೀಸೆ. ಕಣ್ಣುಗಳಿಂದ ಆತ್ಮವಿಶ್ವಾಸ, ಪ್ರೀತಿ ಮಿಂಚುವ ಕಾಂತಿ.

"ಅಜ್ಜಾ ಅಜ್ಜಾ, ಕತೆ ಹೇಳು ಅಜ್ಜಾ" ಎಂದನು ಮೀಸೆ ಅಣ್ಣಯ್ಯಪ್ಪ.
"ಕುಣಿಯೋಣು ಬಾರಾ" ಎಂದನು ಪಿಂಟೋ.
ಶ್ರೀಧರ ಹಾಡಿದ, ಬಾಬಾ ದನಿ ಸೇರಿಸಿದ. ಉಳಿದವರು ಆಲಾಪನೆ ಮಾಡಿದರು. ತಟ್ಟೆಗಳು ತಮಟೆಗಳಾದುವು. ಅಂಗೈಗಳು ತಾಳ ಬಡಿದುವು. ೬೭ ವರ್ಷದ ಅಜ್ಜ, ಪಿಂಟೋ, ಲಕ್ಷ್ಮಿ, ಮೋಹನ ಮೊದಲಾದವರು ಬೆಂಕಿಯ ಸುತ್ತಲೂ ಕುಣಿದದ್ದೇ ಕುಣಿದದ್ದು, ಹಾಡಿದ್ದೇ ಹಾಡಿದ್ದು.
"ಬೆಟ್ಟ ಈ ರಾತ್ರಿಯೇ ಏರಬಹುದೋ ಅಜ್ಜಾ?" "ಓ ಖಂಡಿತಾ!" "ನಮಗೆ ದಾರಿ ತಪ್ಪಿದರೆ?" "ದಾರಿ ತಪ್ಪುವುದು ಎಂಥಾದ್ದು?" "ನಿಮಗೆ ಈ ಪ್ರಾಯದಲ್ಲಿ ಕೂಡುವುದೋ?" "ಅದು ನೋಡುವಾ!"
ಅಜ್ಜನ ಹೆಸರು ಮೆಂಗಿಲ ಶೇಣವ. ಕುದುರೆಮುಖದ ಕೂಸು. ನನಗೆ ಅವನ ಪರಿಚಯ ಹತ್ತು ವರ್ಷಗಳ ಹಿಂದಿನದು. ಅಂದೂ ಅವನೇ ನಮಗೆ 'ಗೈಡ್' ಮಾರ್ಗದರ್ಶಕ. ಡಿಸೆಂಬರಿನಲ್ಲಿ ದೊರೆಗಳೂ ನಾನೂ ನಾವೂರಿಗೆ ಬಂದಿದ್ದಾಗ ಮೆಂಗಿಲ ಶೇಣವನ ಮನೆಗೆ ಹೋಗಿದ್ದೆವು. ಬಂಗ್ಲೆಯಿಂದ ಮುಕ್ಕಾಲು ಮೈಲು ಕಾಲುದಾರಿಯಲ್ಲಿ ಹೋಗಿ ಒಂದು ಉಬ್ಬುಲು ದಾಟಿ ಇನ್ನೊಂದು ತೋಡನ್ನು ಪಾಲದ ಮೂಲಕ ಹಾಯ್ದು ಹೋದರೆ ಅವನ ಗುಡಿಸಲು:

ಬಳಿಯೊಳೆ ಕೆರೆ, ತೊರೆ, ಮರಬಳ್ಳಿಯ ಹೊರೆ,
ಜೀವದ ತುರುಗಳ ಮೇವುಗಳು
ಅಂಗಳದಲಿ ಹುಲ್ಲೊಟ್ಟಿಲ ತೊಟ್ಟಿಲ
ಏರಿ ಮೆರೆವ ಕರುಮಂದೆಗಳು

**– ಕಡೆಂಗೋಡ್ಲು –**

ನಾವು ಸಮವಸ್ತ್ರಧಾರಿಗಳಾಗಿ ಅಕಸ್ಮಾತ್ತಾಗಿ ಅಲ್ಲಿಗೆ ಹೋಗಿದ್ದುದರಿಂದ ಚಿಕ್ಕಪುಟ್ಟ ಕೋಮಣಧಾರೀ ಮಕ್ಕಳು ಹೆದರಿ ಓಡಿ ಅಡಗಿದರು. ಹಿರಿಯ ಮಗಳು ಹುಲ್ಲುಮೆದೆ ಒಟ್ಟುತ್ತಿದ್ದವಳು ಅವಾಕ್ಕಾಗಿ ಬೆರಗಾಗಿ ನಿಂತಳು.
"ಮೆಂಗಿಲ್ ಸೋಜಾ ಇಲ್ಲವಾ?" ನಾನು ಮಾತಾಡಿದೆ.
ಅಂತೂ ಕನ್ನಡ ಭಾಷೆ ಕೇಳಿ ಅವಳ ಗಾಬರಿ ಕಡಿಮೆಯಾಗಿರಬೇಕು.
"ಓ" ಎಂದು ಕಿವಿಯೆಡೆ ಕೈ ಹಿಡಿದಳು.
ಪುನಃ ಗಟ್ಟಿಯಾಗಿ ಕೂಗಿ ಹೇಳಿದೆ.
"ನಾನಿಲ್ಲಿ ಇದ್ದೇನೆ" ಎಂದು ಮುದುಕ ಹೊರಗೆ ಚಿಮ್ಮಿದ. ದೊಡ್ಡ ಲಂಗೋಟಿಯೊಂದೇ ಅವನ ಮೈಮೇಲಿದ್ದ ವಸ್ತ್ರ. ತಲೆಯ ಮೇಲೆ ಮುಟ್ಟಾಳೆ. ಕೈಯಲ್ಲಿ ಖಾಲಿ ಮಾಡಿದ ಗೊಬ್ಬರದ ಕುಕ್ಕೆ. ಸುತ್ತಲೂ ಗೊಬ್ಬರದ, ಹಸಿಹುಲ್ಲು ಕೊಳೆತ ವಾಸನೆ. "ಚಿಂದಿಯನುಟ್ಟೇ ಹಾಳೆಯ ತೊಟ್ಟೇ ಇದೆ ಸಿಂಗರವೆಂದೆಸೆಯುವರು."
"ಏನು ಮೆಂಗಿಲ ಸೋಜಾ! ನನ್ನನ್ನು ಗೊತ್ತಾಯಿತಾ?"
"ಮೆಂಗಿಲ ಸೋಜಾ ಅಲ್ಲ, ಮೆಂಗಿಲ ಶೇಣವ" ಎಂದು ತಿದ್ದಿದ. ನನ್ನ ಹತ್ತಿರ ಬಂದು, ಕಣ್ಣರಳಿಸಿ ನೋಡಿ ಮೇಲೆ ಕೆಳಗೆ ಪುನಃ ನೋಡಿ, "ಹ್ಞಾ ನೋಡಿದ್ದೇನೆ. ಆದರೆ ಈ ಕಣ್ಣು ಈಗ ಮೊದಲಿನಷ್ಟು ಶುದ್ಧ ಇಲ್ಲ ಸ್ವಾಮಿ."
"ಅಂತೂ ಎಲ್ಲಿ ಯಾವಾಗ ನೋಡಿದ್ದು?"
"ಎಲ್ಲಿ? ಮತ್ತೆಲ್ಲಿ ನೋಡಿದ್ದರೆ ಇಲ್ಲಿಯೇ. ನಮಗೆ ಸ್ವಾಮಿ ಪ್ರತಿ ವರ್ಷವೂ ಜನ ಬಂದು ಬಂದು ಹೋಗುತ್ತಾರೆ. ಎಲ್ಲರಿಗೂ ಗೈಡು ನಾನೇ. ಹಾಗಾಗಿ ಹೆಸರು ಮಿನಿ ನೆನಪು ಉಳಿಯೋದಿಲ್ಲ."

ಕುದುರೆಮುಖದ ಅಧ್ಯಕ್ಷನಿವ. ಅಧ್ಯಕ್ಷರನ್ನು ನಮಗೆ ಗೊತ್ತಿರುವುದು. ಆದರೆ ಅವರಿಗೆ ನಮ್ಮೆಲ್ಲರನ್ನೂ ಗೊತ್ತಿರಬೇಕೆಂದಿಲ್ಲವಷ್ಟೆ.
"ನೀವೆಲ್ಲ ಕ್ಷೇಮವೇ? ಹೆಂಡತಿ ಮಕ್ಕಳು?"
"ಕ್ಷೇಮ ಎಂಥಾದ್ದು? ನೋಡಿ ಸ್ವಾಮಿ, ಅವಳು ಹೋಗಿ ಎಂಟು ವರ್ಷ ಆಯಿತು. ಎಂಟು ಮಕ್ಕಳೂ ನಾನೂ ಇದ್ದೇವೆ."
"ಅಯ್ಯೋ ಪಾಪ."
"ಪಾಪ ಎಂದರೆ ಮಾಡುವುದೇನು ಸ್ವಾಮಿ? ನನಗೆ ನಿಮಗೆ ಪ್ರೋಗ್ರಾಮು ಉಂಟು. ಕಾಲರಾಯನಿಗುಂಟೋ! ಕರೆದಾಗ ಹೋಗಲೇಬೇಕಷ್ಟೆ."
"ಏನಾಗಿತ್ತು?"
"ಹೇಳುವಂಥಾದ್ದು ಏನೂ ಇಲ್ಲ. ಈ ಹುಡುಗ ಹುಟ್ಟಿದಾಗ ನೋಡಿ ಜ್ವರ ಬಂತು. ಎಂಥ ಸುಡುಗಾಡು ಜ್ವರವೋ ಅದು ಬಿಟ್ಟಿತು. ಆದರೆ ಮತ್ತೆ ಅವಳು ಅವಳಾಗಿ ಉಳಿಯಲಿಲ್ಲ. ಯಾರೂ ಅವಳಿಗೆ ಗುರ್ತೇ ಆಗಲಿಲ್ಲ. ಮಗುವಿಗೆ ಮೊಲೆ ಹಾಲು ಊಡಲಿಲ್ಲ. ಅವಳೂ ಆಹಾರ ತೆಗೆದುಕೊಳ್ಳಲಿಲ್ಲ. ಹಳ್ಳಿ ಔಷಧಿ, ಮದ್ದು ಮಂತ್ರ ಹರಕೆ ಆಯಿತು. ನಮ್ಮ ಪಾದ್ರಿಗಳು ಸಹ ಔಷಧಿ ಕೊಟ್ಟರು. ಆದರೆ ತೆಗೆದುಕೊಳ್ಳಬೇಕಲ್ಲ. ಬೆಳ್ತಂಗಡಿಯಿಂದ ಡಾಕ್ಟ್ರನ್ನು ಕರೆದು ತಂದು ಸೂಜಿ ಮದ್ದೂ ಕೊಟ್ಟಾಯಿತು. ಆದರೇನು ಮಾಡೋದು ಸ್ವಾಮಿ, ಉಪ್ವಾಸನೇ ಬಿದ್ದು ಹೋಗಿಬಿಟ್ಟಳು."
"ಆಗ ಮಗೂಗೆ?"
"ಮಗೂಗೆ ಎರಡು ತಿಂಗಳಾಗಿರಲಿಲ್ಲ. ಮತ್ತೆ ನೋಡಿ ಹೀಗೇ ಬೆಳೆಸಿಕೊಂಡು ಬಂದೆವು."
ಹುಡುಗ ಸುಟಿಯಾಗಿ ಮುದ್ದಾಗಿ ಇದ್ದ. ತಾಯಿಯನ್ನು ಕಾಣದ ಶಿಶು ಪಾಪ.
"ಮಕ್ಕಳಿಗೆ ಮದುವೆ ಏನಾದರೂ?"
"ದೊಡ್ಡವನು ಅಪ್ಪು, ಇಲ್ಲೇ ಇದ್ದಾನೆ. ಇನ್ನೂ ಹುಡುಗ. ಅವನಕ್ಕ ಮಂಗ್ಳೂರಿನಲ್ಲಿ ನಮ್ಮ ಜನದ ಮನೆಯಲ್ಲಿ ಕೆಲಸಕ್ಕಿದ್ದಾಳೆ. ಮದುವೆಯಿಲ್ಲ. ಇವಳು ಅವನ ತಂಗಿ. ಕಿವಿ ಸೋರಿ ಸೋರಿ ಕೇಳಿಸೋದೇ ಇಲ್ಲ. ಮದುವೆ ಬೇಡಾಂತಲೇ ಇದ್ದಾಳೆ. ಉಳಿದವರು ಚಿಕ್ಕವರು ನೋಡಿ."
"ಪಾಪ ಎಂಥ ಕಷ್ಟವಾಯಿತು."
"ಏನು ಮಾಡೋದು, ಆಯುಷ್ಯ ಇದ್ದಷ್ಟು ದಿವಸ ನಾನು ದುಡಿಯಬೇಕಷ್ಟೆ?"

ಅಜ್ಜನನ್ನು ಕರೆದುಕೊಂಡು ಬಂಗ್ಲೆಗೆ ಬಂದೆ. ಬರುತ್ತ, "ಅದಿರಲಿ, ನಿಮ್ಮ ಮನೆಗೆ ಬಂದವನಿಗೆ ಕಾಫಿ, ತಿಂಡಿ, ಸೀಯಾಳ ಕೊಡಬೇಡವೇ?" ಎಂದು ಕೆಣಕಿದೆ.
"ಖಂಡಿತಾ! ಆದರೆ ನೀವು ದೊಡ್ಡವರು ತೆಕ್ಕೊಳ್ಳುತ್ತೀರೋ ಇಲ್ಲವೋ! ಮತ್ತೆ ನಮ್ಮದೆಂಥಾ ಕಾಫಿ."
"ನೀವು ಕೊಟ್ಟು ನೋಡಿ."
"ಹಾಗಾದರೆ ಊಟ ನಮ್ಮಲ್ಲಿ. ಬಡವರ ಗಂಜಿ."
ದೊರೆಗಳೂ ನಾನೂ ಮೆಂಗಿಲನೊಡನೆ ಕುದುರೆಮುಖದ ಮ್ಯಾಪ್ ಹಿಡಿದು ಮಾತಾಡಿದೆವು. ಸುಮಾರು ೧೦೦–೧೫೦ ಚದರ ಮೈಲು ವ್ಯಾಪಿಸಿದ್ದ ಆ ಪ್ರದೇಶದ ಪ್ರತಿ ಬೆಟ್ಟ, ಕೊರಕಲು, ದಿಬ್ಬ, ಹಳ್ಳಿ ಇವುಗಳ ಹೆಸರು, ವಿವರ, ಎತ್ತರ, ದೂರ ಎಲ್ಲ ಅವನಿಗೆ ಬಾಯಿ ಪಾಠ. ಕುದುರೆಮುಖದ ಶಿಶುವಲ್ಲವೇ!
"ನಾವು ಜನವರಿಯಲ್ಲಿ ಬರುತ್ತೇವೆ. ಹತ್ತು ದಿವಸ ಇರುತ್ತೇವೆ. ನಿಮ್ಮ ಸಹಾಯಬೇಕು. ಮೇಲೆ ಬಂದು ದಾರಿ ತೋರಿಸಬೇಕು."
"ಆಗಬಹುದು. ಮೊದಲೇ ಬರುವ, ಟೈಮು ತಿಳಿಸಿಬಿಡಿ."
ಅದೇ ಪ್ರಕಾರ ನಾವು ದಿವಸ, ಟೈಮು ತಿಳಿಸಿದ್ದೆವು. ಆದರೂ ನಮ್ಮ ಮೊದಲಿನ ಲಾರಿ ಬಂದಾಗ ಮೆಂಗಿಲ ಶೇಣವ ಅಲ್ಲಿರಲಿಲ್ಲ. ಈಗ ಬಂದು ಸೇರಿದ್ದಾನೆ. ಬಹುಶಃ ನಾವು ಹೇಳಿ ಕಳಿಸಿದ ಮೇಲೆ ಬಂದಿರಬೇಕು. ನಮ್ಮನ್ನು 'ಡೋಂಗಿ ಮಂದಿ' ಎಂದು ತಿಳಿದಿದ್ದನೋ ಏನೋ! ಅವನನ್ನು ಕರೆದು, "ಅಲ್ಲ ಶೇಣವ, ನಾವು ಬರುತ್ತೇವೆ ಎಂದು ಮೊದಲೇ ಬರೆದಿದ್ದರೂ ನೀವು ಯಾಕೆ ನಾವಿಲ್ಲಿಗೆ ಬಂದಾಗ ಇರಲಿಲ್ಲ?" ಎಂದು ತಪ್ಪು ಹುಡುಕಲು ಕೆಣಕಿದೆ.
"ಹೌದೋ ಸ್ವಾಮಿ! ನೀವು ಕೊಟ್ಟ ಟೈಮು ನಾಲ್ಕು ಗಂಟೆ. ನಾನು ಬಂದು ೩ರಿಂದ ೫ರವರೆಗೂ ಕಾದೆ. ನೀವು ಬರಲಿಲ್ಲ. ತಡವಾಗಿ ಬಂದರೆ ಮತ್ತೆ ಹೇಗೂ ಗೊತ್ತಾಗುವುದಲ್ಲ ಎಂದು ಮನೆಗೆ ಹೋದೆ."
೧೨ನೇ ಮೈಸೂರು ಟೈಮು ಎಂದು ಜಂಬ ಮಾಡುತ್ತಿದ್ದ ನನಗೆ ಅಜ್ಜನಿಂದ ಪಾಠ ಕಲಿಯುವಂತಾಯಿತು.

ಮೆಂಗಿಲ ಶೇಣವ ದೊರೆಗಳ ಕಾಲದಿಂದಲೂ ಕುದುರೆಮುಖದ 'ಶೆರ್ಪಾ' ಆಗಿದ್ದಾತ. ಅವನ ಜೀವನಾನುಭವ, ಕುದುರೆಮುಖ ಶ್ರೇಣಿಯ ಪ್ರತಿ ಏರು, ತಗ್ಗು, ಬಂಡೆ, ಕಾಡು ಇವುಗಳ ಬಗೆಗಿನ ಜ್ಞಾನದಷ್ಟೇ ವಿಶಾಲವೂ ಆಳವೂ ಆಗಿತ್ತು. ಒಂದೊಂದು ಮಾತೂ ಈ ಅನುಭವದ ಕಡಲಿನಿಂದ ಹೊರಬರುತಿದ್ದ ಮುತ್ತು. ಇವನೇ ನಮ್ಮ ಮುಖ್ಯ ಶೆರ್ಪಾ. ಇವನ ಅನುಯಾಯಿಗಳಾಗಿ ಇನ್ನೂ ಮೂವರನ್ನು ನೇಮಿಸಿದೆವು.

ಫಾರೆಸ್ಟ್ ಗಾರ್ಡ್ ಪೂಜಾರಿಯೂ ಹಾಜರಾಗಿದ್ದ. ಅವನು ಸದಾ ನಮ್ಮ ಸೇವೆಗೆ ಸೊಂಟಗಟ್ಟಿ ಮಿಲಿಟರಿ ಸಲಾಮು ಕೊಡುತ್ತ ನಿಂತಿದ್ದ. ಆ ಖಾಕಿ ಸಮವಸ್ತ್ರ ಧರಿಸಿದ ಅವನು ಹಳ್ಳಿಗರಿಗೆ ಘನ ಸರಕಾರದ ಪ್ರತಿನಿಧಿ. ಅವನ ದರ್ಪ ಪ್ರಭಾವ ಅಷ್ಟು. ನಮ್ಮೆದುರು ಅವನ ವಿನಯ ಮರ್ಯಾದೆಯೂ ಅಷ್ಟೇ.
"ಸೌದೆ ಬೇಕಲ್ಲ, ಪೂಜಾರಿ."
"ಆಯ್ತು ಸರ್."
"ನಮಗೆ ಎರಡು ಜನ ಬೇಕಲ್ಲ ಪೂಜಾರಿ."
"ಆಯ್ತು ಸರ್."
"ನೀನು ಇಲ್ಲಿಯೇ ಇದ್ದು ಸಹಾಯ ಮಾಡುತ್ತಿರಬೇಕು. ಊಟ ನಮ್ಮೊಡನೆ."
"ಆಯ್ತು ಸರ್."
"ನೀರಿನವಸ್ಥೆ ಏನು ಪೂಜಾರಿ!"
"ಆಯ್ತು ಸರ್. ತೋಡಿನಿಂದ ತರುವುದು ಸರ್."
ಪೂಜಾರಿಯ ಭಾಷೆಯಲ್ಲಿ "ಆಯ್ತು" ಎನ್ನುವುದು ಸಮ್ಮತಿಸೂಚಕ "ಹೂಂ"ನ ಪರ್ಯಾಯ ಪದ. ತಾಂಬೂಲ ರಕ್ತ ರಾಗರಂಜಿತ ಬಾಯಿಯ ಪೂಜಾರಿಯನ್ನು ಫಾರೆಸ್ಟ್ ಡಿಪಾರ್ಟ್‌ಮೆಂಟ್ ನಮ್ಮ ಸಹಾಯಕ್ಕಾಗಿ ಸದಾ ಅಲ್ಲಿಯೇ ಉಳಿಯಬೇಕೆಂದು ವಿಧಿಸಿತ್ತು.

ರಾತ್ರಿ ೧೦ ಗಂಟೆಗೆ ನಾವೂರಿನ ಪ್ರಥಮ ಊಟ: ಸಾರು, ಹಪ್ಪಳ, ಪಲ್ಯ, ಮುದ್ದೇಹುಳಿ, ಉಪ್ಪಿನಕಾಯಿ. ಅದರ ರುಚಿ ಶೇಣವನ ನುಡಿಮುತ್ತಿನಲ್ಲಿ "ಗೇರುಹಣ್ಣಿನ ಗಂಗಸರಕ್ಕಿಂತಲೂ ಮಿಗಿಲು." ಶಿಬಿರಾಗ್ನಿಯ ಸುತ್ತಲೂ ಎಲ್ಲರೂ ಕುಳಿತು ತೃಪ್ತಿಯಿಂದ ಊಟ ಮಾಡುತ್ತಿದ್ದ ಆ ದೃಶ್ಯ ಕೃತಕೃತ್ಯತೆಯ ಕುರುಹು. ಆ ಊಟವನ್ನು ನಾವು ಸಂಪಾದಿಸಿದ್ದೆವು. ಅದರ ರುಚಿಯೂ ಅಷ್ಟೇ ಹೆಚ್ಚು.

ಡೇರೆಗಳನ್ನು ಆ ರಾತ್ರಿ ಎರಡು ಕಾರಣಗಳಿಗಾಗಿ ಹೊಡೆಸಲಿಲ್ಲ. ಒಂದು, ನಾವು ಎಲ್ಲರೂ ಒಟ್ಟು ಸೇರುವಾಗ ರಾತ್ರಿ ತೀರ ಮೀರಿತ್ತು. ಮತ್ತೆ ಡೇರೆ ನಿಲ್ಲಿಸಿ, ನೆಲ ಸಮತಟ್ಟು ಮಾಡಿ, ಡೇರೆಗಳ ಸುತ್ತಲೂ ಹಾವು–ಕಂದಕ ತೋಡಲು (ಡೇರೆಗಳಿರುವ ಪ್ರದೇಶದ ಸುತ್ತಲೂ ಆಯತಾಕಾರವಾಗಿ ಇರಬೇಕು. ಹೊರಗಿನಿಂದ ಹರಿದುಕೊಂಡು ಬರುವ ಹಾವು ಇದರೊಳಗೆ ಬೀಳುವುದು. ಕಡಿದಾದ ಬದಿಯಿಂದ ಏರುವುದು ಅದಕ್ಕೆ ಸಾಧ್ಯವಿಲ್ಲದಿರುವುದರಿಂದ ಡೇರೆಯಲ್ಲಿರುವವರು ಸುರಕ್ಷಿತರಾಗಿರುತ್ತಾರೆ) ಅವಕಾಶವಿರಲಿಲ್ಲ. ಇದಕ್ಕಿಂತ ಮುಖ್ಯವಾದ ಕಾರಣ ಎರಡನೆಯದು. ಬಂಗ್ಲೆಯ ಜಗಲಿ ಕೋಣೆಗಳು ಬಲು ವಿಶಾಲವಾಗಿದ್ದುವು. ಬಂಗ್ಲೆಯೂ ರಿಪೇರಿಗೊಳಿಸಲ್ಪಟ್ಟು ಸಾಕಷ್ಟು ಭದ್ರವಾಗಿತ್ತು. ರಾತ್ರಿ ಮಲಗುವಾಗ ೧೨ ಗಂಟೆ. ಹುಡುಗರೆಲ್ಲರೂ ದಣಿದಿದ್ದರು. ಆದರೂ ಶಿಸ್ತು ಮೀರಲು ಸಾಧ್ಯವಿಲ್ಲವಲ್ಲ. ಮರುದಿವಸದ ಉಪಾಹಾರಕ್ಕೆ ಬೇಕಾಗುವ ನೀರು ಸಂಗ್ರಹಿಸಲೇ ಬೇಕಾಯಿತು. ಮೇಲಾಗಿ ಕಾರ್ಯಕ್ರಮ ಪ್ರಕಟಿಸಲೂ ಬೇಕಾಗಿತ್ತು.

"ನಾಳೆ ೧೨ನೆಯ ತಾರೀಕು ಕ್ರಮ ಪ್ರಕಾರ ಶಿಕ್ಷಣದ ಆರಂಭ. ೫.೩೦ ಗಂಟೆಗೆ ಹಾಸಿಗೆ ಚಾ. ೬ ಗಂಟೆಗೆ ಉಪಾಹಾರ. ನಿಮ್ಮಲ್ಲೆ ನಾಲ್ವರು ಕ್ಯಾಡೆಟ್ ಶಿಕ್ಷಕರ ಹೊರತಾಗಿ ಉಳಿದ ೩೩ ಮಂದಿಯನ್ನು ೧೧ ಮಂದಿಯ ಮೂರು ಸಮಭಾಗಗಳಾಗಿ ಮಾಡಲಾಗಿದೆ" ಎಂದು ಆಯಾ ಭಾಗಗಳ ಹುಡುಗರ ಹೆಸರುಗಳನ್ನು ಓದಿ ಹೇಳಿದೆ. "ಒಂದನೆಯ ಪಂಗಡ ನಾಳೆ ಶಿಬಿರದಲ್ಲಿಯೇ ಇದ್ದು ಇಲ್ಲಿಯ ವಿಶಿಷ್ಟ ಕಾರ್ಯ ನಡೆಸಬೇಕು. ಎರಡನೆಯದು ಶಿವಪ್ಪನವರ ಮುಂದಾಳುತನದಲ್ಲಿ ಕುದುರೆಮುಖದ ಸರಹದ್ದಿನವರೆಗೆ ಹೋಗಿ ಅಲೆದು ಸಂಜೆಗೆ ಹಿಂತಿರುಗಬೇಕು. ಮೂರನೆಯದು ಜಮಾಲಾಬಾದಿಗೆ ಹೋಗಿ ಬರಬೇಕು. ನಮ್ಮ ನಾಲ್ವರು ವಿದ್ಯಾರ್ಥಿ ಶಿಕ್ಷಕರೂ ನಾನೂ ಜಮಾಲಾಬಾದಿಗೆ ಹೋಗಿ ಬರುತ್ತೇವೆ. ನಿಸಾರ್ ಮತ್ತು ಸ್ವಾಮಿಯವರು ಶಿಬಿರದ ಕರ್ತವ್ಯ ನಿರ್ವಹಿಸುತ್ತಾರೆ. ೬.೩೦ ಗಂಟೆಗೆ ಪ್ರತಿಯೊಂದು ಪಂಗಡವೂ ಅದರದರ ಕರ್ತವ್ಯದಲ್ಲಿ ಲೀನವಾಗಿ ಹೋಗಬೇಕು. ಸಮಯ ೧೨ನೇ ಮೈಸೂರಿನ ಸಮಯ ಎಂಬುದು ನೆನಪಿರಲಿ, ಸಂಶಯ ಉಂಟೇ?"
"ಡ್ರೆಸ್ ಸಾರ್?"
"ಸದಾ ಸಮವಸ್ತ್ರ, ಸಮವಸ್ತ್ರ, ಸ್ವರ್ಗಕ್ಕೂ ಹಸುರು ಕಂದೀಲು."
"ಆದರೆ ಈಗಲೇ ತಡವಾಯಿತಲ್ಲ, ಸರ್."
"ನಾನು ಹೇಳಿದ್ದು ನಾಳಿನ ಕಾರ್ಯಕ್ರಮ. ಅದರ ವಿಚಾರ ಪ್ರಶ್ನೆ ಉಂಟೋ ಎಂದು ಕೇಳಿದ್ದು. ಅಸಂಬದ್ಧ ಪ್ರಲಾಪದ ಅಪಸ್ವರ ಬೇಡ."
ಒಂದನೇ ರಾತ್ರಿ. ದೀರ್ಘ ಪ್ರಯಾಣಾನಂತರ ಚಾರ್ಪಾಯಿಶಾಯಿಯಾಗುವ ನಟ್ಟಿರುಳು. ಬೆಳಗ್ಗೆ ಸ್ವಲ್ಪ ತಡವಾಗಿ ಏಳಬಹುದೋ ಏನೋ ಎಂದು ನಿರೀಕ್ಷಿಸಿದವರಿಗೆ ೫.೩೦ ಗಂಟೆಯ ಹಾಸಿಗೆ ಚಾ ಸುದ್ದಿ ಬಲು ಕಹಿಯಾಗಿರಬೇಕು.

ನಾವು ಊಟ ಮಾಡುವ ಮೊದಲು ಒಂದು ಸಣ್ಣ ಘಟನೆ ನಡೆಯಿತು. ನಾನು ಡಾಕ್ಟರರನ್ನು ಕುರಿತು, "ಕ್ಯಾಂಪ್ ಜೀವನ. ನೀವು ಬಂದದ್ದು ನಮಗೆ ಹತ್ತಾನೆ ಬಲ ಬಂದ ಹಾಗೆ. ನಿಮಗೆ ಕಷ್ಟ ಆದರೂ ನಮಗೆ ಧೈರ್ಯವಾಯಿತು. ಸ್ವಲ್ಪ ದಯವಿಟ್ಟು ಹೊಂದಿಕೊಳ್ಳಿ" ಎಂದೆ.
"ನಾನು ಈ ಮೊದಲೇ ಎನ್‌ಸಿಸಿ ಕ್ಯಾಂಪ್ ಒಂದಕ್ಕೆ ಹೋಗಿದ್ದೇನೆ. ನೀವೆಲ್ಲ ಇರುವಾಗ ನನಗೇನೂ ತೊಂದರೆಯಿಲ್ಲ."

"ಸಂತೋಷವಾಯಿತು. ಈಗ ಊಟಕ್ಕೆ ತಯಾರಾಗಿದೆಯಲ್ಲ. ನೀವು ಪ್ಲೇಟ್ ಏನಾದರೂ ತಂದಿದ್ದೀರಾ?"
ನಮ್ಮ ಮಾತನ್ನು ಕೇಳುತ್ತಿದ್ದವನು ಅವರ ಆರ್ಡರ್ಲಿ. ಅವನು ಉತ್ತರ ಕೊಟ್ಟ, "ಡಾಕ್ಟ್ರು ಪ್ಲೇಟು ಗೀಟು ತರುವ ಕ್ರಮವಿಲ್ಲ."
"ಏನು, ಏನಂದಿರಿ?"
"ಅವರು ಹೇಗೆ ಪ್ಲೇಟು ತರುವುದು?" ಆರ್ಡರ್ಲಿ ಅಂದ.
"ಮತ್ತೆ ಹೇಗೆ ಊಟ ಮಾಡುತ್ತಾರೆ?" ನನಗೆ ಕುತೂಹಲವಾಯಿತು.
"ಅವರು ಡಾಕ್ಟ್ರು. ಅವರು ಯಾಕೆ ತರಬೇಕು? ಅದು ನೀವು ಒದಗಿಸಿಕೊಡಬೇಕು."
ಅವನ ಮಾತಿನ ಠೀವಿ ಅದುವರೆಗಿನ ಹುಳಿ ವರ್ತನೆ ನನ್ನನ್ನು ರೇಗಿಸಿತು.
"ನಿನ್ನ ಹತ್ತಿರ ಮಾತಾಡಿದೆನಾ? ಅಧಿಕ ಪ್ರಸಂಗ ಬೇಡ. ನಿನ್ನ ಡಾಕ್ಟರರೇನು ಸ್ವರ್ಗದಿಂದ ಬಂದವರಾ?"
ಡಾಕ್ಟರರ ಕಡೆಗೆ ತಿರುಗಿ ಹೇಳಿದೆ, "ಕ್ಷಮಿಸಿ. ಇದು ನಿಮಗೆ ಅನ್ವಯವಾಗುವುದಿಲ್ಲ. ಈ ಸಣ್ಣ ಮನುಷ್ಯನ ಮಾತು ನೋಡಿ."
ಡಾಕ್ಟರರು ಸೀದಾ ಅವನಿಗೆ ಬಿರುನುಡಿದರು, "ನಿನ್ನನ್ನು ಸರಕಾರ ಇಲ್ಲಿಗೆ ಆರ್ಡರ್ ಕೊಟ್ಟು ಕೆಲಸ ಮಾಡಲು ಕಳಿಸಿದೆ, ಮದುವೆ ಮನೆಗೆಂದಲ್ಲ. ನೀನು ಸರಿಯಾಗಿರದಿದ್ದರೆ ನಾನೇ ನಿನ್ನನ್ನು ಹಿಂದೆ ಕಳಿಸಿಬಿಡುತ್ತೇನೆ."
ಆ ಗಳಿಗೆಯಿಂದ ಅವನಂಥ ವಿಧೇಯನನ್ನು, ಮನಃಪೂರ್ವಕವಾಗಿ ದುಡಿಯುವವನನ್ನು ನಾನು ನೋಡಲಿಲ್ಲ.

ಡಾಕ್ಟರರೂ ಅವರ ಆರ್ಡರ್ಲಿಯೂ ಬಂಗ್ಲೆಯ ಬಲಬದಿಯ ಕೋಣೆಯಲ್ಲಿ ಮಲಗಿದರು. ಅದೇ ಆಸ್ಪತ್ರೆಯೂ ಆಯಿತು. ಎಡಬದಿಯ ಕೋಣೆ ದೊರೆಗಳಿಗೆ, ಮುಂದಿನ ಮತ್ತು ಹಿಂದಿನ ವಿಶಾಲ ಜಗಲಿಗಳಲ್ಲಿ ಹುಡುಗರು ಮಲಗಿದರು. ಹೀಗೆ ನಾಲ್ಕು ಕಡೆಗಳಲ್ಲಿ ಸಂರಕ್ಷಣೆ ಪಡೆದ ನಡುವಣ ಹಾಲ್ 'ಮಂತ್ರಿ ಸಂಪುಟ'ವಾದ ನಾವು ನಾಲ್ವರಿಗೆ: ಶಿವಪ್ಪ, ನಿಸಾರ್, ಸ್ವಾಮಿ ಮತ್ತು ನಾನು. ಹಾಗಿದ್ದರೂ 'ಪರೀಕ್ಷಿದ್ರಾಜನೂ ನಿಂಬೇ ಹಣ್ಣೂ' ಕತೆ ಸ್ವಾಮಿಯವರ ನೆನಪಿಗೆ ಬಂದಿತು. ದಕ್ಷಿಣ ಕನ್ನಡದಲ್ಲಿ ತುಂಬ ಹಾವು, ಸರ್ಪಗಳಿವೆ ಎಂದು ಅವರು ಕೇಳಿದ್ದರು. ಅದರಲ್ಲಿಯೂ ನಾವು ಈಗ ಕಾಡಿನ ಮಧ್ಯೆ ಬೇರೆ ಇದ್ದೇವೆ. ಹೀಗಾಗಿ ಸ್ವಾಮಿ ಮುರುಕು ಬಾಗಿಲುಗಳ ಹರಕು ಬಿರುಕುಗಳಿಗೆಲ್ಲ ಚಿಂದಿ ಚೂರುಗಳನ್ನು ತುಂಬಿಸಿ ಭದ್ರ ಮಾಡಿದರು. ಕಿಟಿಕಿ ಪಡಿಗಳನ್ನು ಮುಚ್ಚಿದರು. ಮೊದಲೇ ಸೆಕೆ. ಇದರಿಂದ ಗಾಳಿ ಸಂಚಾರ ಬಂದ್ ಆಯಿತು.
"ಏನು ಸ್ವಾಮಿ ಇದು?"
"ಹೋಗ್ಲಿ ಬಿಡಿ ಸಾರ್, ಜೀವ ಮುಖ್ಯ ಅಲ್ಲವಾ?"
ಹೀಗೆ ಮಾತಾಡುತ್ತಿದ್ದಂತೆಯೇ ಲಯಬದ್ಧ ಗೊರಕೆಯ ತಾನವನ್ನು ಶಿವಪ್ಪ ನುಡಿಸಿದರು. ಸ್ವಾಮಿ ಮರುದನಿಗೈದರು. ಬೆಂಗಳೂರಿನಿಂದ ಯಾವ ಮುಹೂರ್ತದಲ್ಲಾದರೂ ಬರಬಹುದಾದ ತಾರಿನ ಸುದ್ದಿ 'ಕಲ್ಪಾಂತರಗಳ ಸಂಕ್ಷಿಪ್ತಾಕೃತಿ'ಯ ಆಗಮನದ ಶುಭ ಸಮಾಚಾರ – ಇದನ್ನು ನೆನೆಯುತ್ತ ನಿಸಾರರು ಸಿಗರೇಟ್ ಸುರುಳಿ ಉಗುಳಿದರು. ನಿದ್ರೆ ಬಂತೋ ಬರಲಿಲ್ಲವೋ, ಬಾಬಾ ಪ್ರಸಾದನ ಬಿಗಿಲು ನಮ್ಮನ್ನು ಬೈರಿಗೆಯಂತೆ ಕೊರೆದೆಬ್ಬಿಸಿತು.

# ನಮ್ಮ ವಿದ್ಯಾರ್ಥಿ ಶಿಕ್ಷಕರು

## ಅಧ್ಯಾಯ ಹದಿನಾರು

ನಮ್ಮ ವಿದ್ಯಾರ್ಥಿ ಶಿಕ್ಷಕರು ಲಕ್ಷ್ಮೀನಾರಾಯಣ, ಪಿಂಟೋ, ಮೋಹನ ಮತ್ತು ಜಯರಾಮ. ಇವರು ಹಿಮಾಲಯದ ಪರ್ವತಾರೋಹಣ ಸಂಸ್ಥೆಯಲ್ಲಿ ತರಬೇತಿ ಹೊಂದಿ ಬಂದ ಕ್ಯಾಡೆಟ್ಟುಗಳು. ಮೊದಲಿನ ಮೂವರೂ ಎ ದರ್ಜೆ ಪಡೆದವರು. ಇವರಲ್ಲಿ ಸರ್ವಸಮರ್ಥ – all rounder, ಲಕ್ಷ್ಮಿ. ಇವನು ಮುಖ್ಯ ಶಿಕ್ಷಕ. ಗಾಂಧಾರಿ ಮೆಣಸಿನಂತೆ (ಕುಬ್ಜ ಗಾತ್ರ, ಗರಿಷ್ಠ ಖಾರ ಇರುವ ಮೆಣಸಿನಕಾಯಿ) ಸ್ವರೂಪ ಚಟುವಟಿಕೆಯೂ ಹಾಗೆಯೇ. ಕಡಿದಾದ ಕಲ್ಲು ಬಂಡೆ, ಆಳವಾದ ಪ್ರಪಾತ ಎಲ್ಲವೂ ಇವನಿಗೆ ಬಯಲಿನ ಮೇಲೆ ನಡೆದಷ್ಟೇ ಸುಲಭ. ವೈಜ್ಞಾನಿಕವಾಗಿ ವಿಚಾರಗಳನ್ನು ವಿವರಿಸಿ ಹೇಳಿಕೊಟ್ಟು, ಸ್ವತಃ ಮಾಡಿತೋರಿಸಿ ಇತರರಿಂದ ಮಾಡಿಸುವುದರಲ್ಲಿ ಅತಿ ನಿಸ್ಸೀಮ. ಕ್ಲಾಸಿನಲ್ಲಿ ಇವನು ನನ್ನ ಶಿಷ್ಯನಾಗಿದ್ದರೂ ಶಿಲಾರೋಹಣದಲ್ಲಿ ನಾವೆಲ್ಲರೂ ಇವನ ಶಿಷ್ಯರೇ. ಇವನಿಗೆ ಸರಿಯಾದ ಅನುಯಾಯಿ ಮೋಹನ. ಸದಾ ಕಾರ್ಯತತ್ಪರ, ಸುಟಿ, ಚಟುವಟಿಕೆ, ಜೊತೆಗೆ ನಗುಮೊಗ. ಇವನು ಸೊಗಸಾದ ಹಾಡುಗಾರನೂ ಹೌದು. ಹುಡುಗರಿಗೆ ಇವನ ಮೇಲೆ ಅಮಿತ ವಾತ್ಸಲ್ಯ. ಲಕ್ಷ್ಮಿಯೊಡನೆ ಭಯ. ಬಂಡೆಯ ಮೇಲೆ ಲಕ್ಷ್ಮಿ, ಕೆಳಗೆ ಮೋಹನ ಹೀಗೆ ಇವರ ಜೊತೆ ನಡೆಯುತ್ತಿತ್ತು. ವಿ.ಜೆ. ಪಿಂಟೋ ಇಂಗ್ಲಿಷ್ ಭಾಷೆಯ ವರ್ಸೆಟೈಲ್ ಜೀನಿಯಸ್, ಕಮ್ಯೂನಿಸ್ಟ್ ಭಾಷೆಯ ಥಿಯೊರೆಟಿಶಿಯನ್. ಯಾವ ಸಾಹಸವನ್ನಾದರೂ ಚೆನ್ನಾಗಿಯೇ ಪ್ರದರ್ಶಿಸಬಲ್ಲವನಾದರೂ, ಅದರ ವಿವರ ತಿಳಿಸಿ ಹೇಳುವುದರಲ್ಲಿ, ಹಾಗೆ ಹೇಳುವಾಗ ಅದರ ಅಪಾಯಾಂಶವನ್ನು ಸ್ವಲ್ಪ ವಿವರಿಸಿ ತಿಳಿಸುವುದರಲ್ಲಿ ಇವನಿಗೆ ಅಧಿಕಾಸಕ್ತಿ.



ಉಪಕುಲಪತಿಗಳು ಲಕ್ಷ್ಮೀನಾರಾಯಣನಿಗೆ ಪ್ರಶಸ್ತಿ ನೀಡುತ್ತಿದ್ದಾರೆ. ಮೇ. ನಾರಾಯಣ್‌ಸಿಂಗ್, ಪ್ರೊ. ಉಮರ್ಜಿ ಮತ್ತು ಲೆ. ನಿಸಾರ್ ಅಹಮದ್‌ರನ್ನು ನೋಡಬಹುದು.

"ನಿಮಗೆ ಈ ಕಲ್ಲಿನಿಂದ ಹಾರಲೇಬೇಕೇನಪ್ಪಾ? ಆದರೆ ನೋಡಿ ಕಾಲು ಜಾರೋದು, ನೀವು ಹೆದರೋದು, ಏಕೆ ಬೇಡದ ಉಸಾಬರಿ? ನಿಮಗೆ ಧೈರ್ಯ ಇಲ್ಲದಿದ್ರೆ ಮೇಲೇ ಸುಮ್ಮನೆ ಇದ್ದುಬಿಡಿ. ಅದರಲ್ಲಿ ಅಪಮಾನವೇನೂ ಇಲ್ಲ. ನೋಡಿ ನಾನು ಹಿಮಾಲಯದಲ್ಲಿ ಇದ್ದಾಗ ಹೀಗೇ ಒಂದು ಪ್ರಸಂಗ..." ಇದು ಪಿಂಟೋ ಮಾತಿನ ಸರಣಿ.

"ಏಯ್ ಇಲ್ನೋಡೋ! ನೀನು ಹಾರು ಸುಮ್ಮನೆ. ಏನೂ ಆಗೋದಿಲ್ಲ. ನಾನಿದ್ದೇನೆ. ನೂಕಿಬಿಡ್ತೀನಿ ನೋಡು. ನೀನೆಲ್ಲೋ ಶುದ್ಧ ಹೆಣ್ಣು ಕಾಣಮ್ಮ." ಇದು ಲಕ್ಷ್ಮಿಯ ಮಾತಿನ ಝರಿ, ಪ್ರಭುಸಮ್ಮಿತಿ.

"ನೋಡು ಕಾಲು ಮೆತ್ತಗಿಡು. ಹೀಗೆ, ಹೀಗೆ. ಈಗ ಎಲ್ಲ ಸರಿಯಾಯಿತು. ಭಯವಾಗುವುದಿಲ್ಲ. ಚೆನ್ನಾಗಿ ಮಾಡಿದೆ, ಹಾಗೆ ಬಾ, ನಾಬಂದೆ, ಬಂದೆ" ಇದು ಮೋಹನನ ಹಿತವಾಣಿ, ಕಾಂತಾಸಮ್ಮಿತಿ.

"ವಂಡರ್ಫುಲ್, ವೆರಿಗುಡ್, ಷಾಭಾಸ್, ಏಯ್ ಹಾರಿಬಿಡು – ಹಾಗೆ, ಹಾಗೆ" ದೂರದಿಂದ ನಿಂತು ಉಚಿತವೋ ಅನುಚಿತವೋ ಸದಾ ಅತಿಶಯೋಕ್ತಿಯ ಉದ್ಗಾರದ ಮಳೆಗರೆಯುವ ಹುಡುಗ ಜಯರಾಮ. ಇವನಿನ್ನೂ ಎಳೆಗೂಸು. ಹಿಮಾಲಯದಿಂದ ಮರಳಿದ ತರುಣದಲ್ಲಿ ತೀರ ಬಿಸಿ ಬಿಸಿಯಾಗಿದ್ದ. ಬಿಲೇ ಗಿಲೇ ಯಾವುದೂ ಬೇಡ, ಎಲ್ಲಿ ಬೇಕಾದಲ್ಲಿ ಹಾರುತ್ತೇನೆ ಎಂದು ಹೊರಟ. ಆ ಒಂದು ಆದಿತ್ಯವಾರ ನಾವು ಶೇಷಾದ್ರಿಪುರದ ಶಿವಾನಂದ ಸ್ಟೋರ್ಸ್ ಎದುರಿನ ಬಂಡೆಗಳಲ್ಲಿ ಏರುವುದನ್ನೂ ಜಿಗಿಯುವುದನ್ನೂ ಅಭ್ಯಸಿಸುತ್ತಿದ್ದೆವು. ಹುಡುಗರನ್ನು ನಾಲ್ಕು ತಂಡ ಮಾಡಿ ಒಂದನ್ನು ಜಯರಾಮನ ವಶ ಬಿಟ್ಟು ನಾನು ಉಳಿದವರ ಮೇಲುಸ್ತುವಾರಿಕೆ ನೋಡಲು ಆ ಕಡೆ ಸರಿದಿದ್ದೆ. ಮುಂದಿನ ಗಳಿಗೆಯಲ್ಲಿ, "ಜಯರಾಮ ಬಿದ್ದ, ಭಯಂಕರ ಅಪಾಯವಾಗಿದೆ" ಎಂದು ಹುಡುಗರ ಬೊಬ್ಬೆ ಕೇಳಿಸಿತು. ನನಗೆ ಹೆದರಿಕೆಯಾಯಿತು. ಹೋಗಿ ನೋಡಿದೆ. ಹತ್ತಡಿ ಎತ್ತರದ ಬಂಡೆ. ಬಿಲೇ ಇಲ್ಲದೇ stomach rappling ಮಾಡಿ ತೋರಿಸಲು ಹೊರಟಿದ್ದಾನೆ. ಇದು ನಮ್ಮ ಆಜ್ಞೆಗೆ ವಿರೋಧ – ಬಿಲೇ ಇಲ್ಲದೆ ಯಾರೂ ಯಾವ ಸಾಹಸವನ್ನೂ ಮಾಡಿ ತೋರಿಸತಕ್ಕದ್ದಲ್ಲ. ವಿದ್ಯಾರ್ಥಿ ಶಿಕ್ಷಕನೇ ಇದನ್ನು ಉಲ್ಲಂಘಿಸಿದ್ದ. ಇಳಿಯುವಾಗ ಕೈ ಜಾರಿತು. ಬಿದ್ದ, ಮುಖ ಕೆಳಗಾಗಿ ಬಿದ್ದ. ಒಂದು ಕಣ್ಣಿನ ಪಕ್ಕಕ್ಕೆ ಗಾಯವಾಗಿ ಆ ಕಣ್ಣು ಮುಚ್ಚಿಹೋಗಿತ್ತು. ಅವನಿಗೆ ಜ್ಞಾನವಿರಲಿಲ್ಲ. ಎದೆ ಮುಂತಾದ ಕೋಮಲ ಭಾಗಗಳಿಗೆ ಪುಣ್ಯವಶಾತ್ ಪೆಟ್ಟಾಗಿರಲಿಲ್ಲ. ನೋಡಿದವರೆಂದರು ಐದಡಿ ಇಳಿದ ಮೇಲೆ ಹೀಗಾಯಿತೆಂದು. ಸದ್ಯ ಇದ್ದುದರಲ್ಲಿ ಇದೊಂದು ಧೈರ್ಯ. ನೀರು ಚಿಮುಕಿಸಿದೆವು. ಜ್ಞಾನ ಬಂದಿತು. ದೊಡ್ಡ ರಸ್ತೆ ಸಮೀಪದಲ್ಲೇ ಇದ್ದುದರಿಂದ ಅವನನ್ನು ಅಲ್ಲಿವರೆಗೆ ನಡೆಸಿಕೊಂಡು ಹೋಗಿ ಆಟೋರಿಕ್ಷಾದಲ್ಲಿ ಕೂರಿಸಿ ನಾನೇ ಸರ್ಕಾರೀ ಆಸ್ಪತ್ರೆಗೆ ಸಾಗಿಸಿದೆ. ಬೆಂಗಳೂರು ನಗರ – ಅಷ್ಟರೊಳಗೇ ಅಲ್ಲಿ ಭಾರೀ ಜನಸಂದಣಿ ಸೇರಿತ್ತು. ಇನ್ನು ಅವರ ಮಾತು ಕತೆ, ಅಂತೆ, ಕಂತೆ ಸಾಹಿತ್ಯದಲ್ಲಿ ರಂಗುರಂಗಾಗಿ ಕಂಡೀತು; ಸಂಬಂಧಿಸದವರಿಗೆ ವಿನೋದವಾಗಿಯೂ ತೋರೀತು. ಆದರೆ ಆ ದುರ್ಭರ ಪ್ರಸಂಗದಲ್ಲಿ ಸ್ವತಃ ಭಾಗಿಗಳಾದ ನಮಗೆ, ಇರುವ ವೇದನೆಯ ಜೊತೆಗೆ, ಇದೊಂದು ನಿವಾರಣೀಯ ಕಿರಿಕಿರಿಯೂ ಆಗಿತ್ತು. ಮುಂದಿನ ಒಂದು ಗಂಟೆ ಆಸ್ಪತ್ರೆಯಲ್ಲಿ. ಸುದೈವದಿಂದ ಅವನಿಗೆ ಹೇಳುವಂಥ ಅಪಾಯವೇನೂ ಆಗಿರಲಿಲ್ಲ. ಅಲ್ಲಿಯ ವಿಶಿಷ್ಟ ಪ್ರಥಮ ಚಿಕಿತ್ಸೆ ಮುಗಿದ ಅನಂತರ ಅವನನ್ನು ನನ್ನ ಜೊತೆಯಲ್ಲೇ ಕಳಿಸಿಕೊಟ್ಟರು. ಆ ಬಂಡೆಯನ್ನು ಜಯರಾಮ ಬಂಡೆ ಎಂದು ಈಗ ನಾವು ಕರೆಯುತ್ತೇವೆ. ಎಲ್ಲ ಸುಖಾಂತವಾದುದರಿಂದ ಈ ಜಯರಾಮ ಬಂಡೆ ವಿನೋದದ – ಬಂಡೆಗೆ ಮಂಡೆ ಹೆಟ್ಟಬೇಡ – ಪ್ರತೀಕವಾಗಿದೆ. ಈ ಅನುಭವದ ಅನಂತರ ಜಯರಾಮ ಪಿಂಟೋಗಿಂತಲೂ ಹತ್ತುಪಟ್ಟು ಥಿಯೊರೆಟಿಶಿಯನ್ ಆದ. ತಮಾಷೆ ಹಾಗಿರಲಿ. ನಮ್ಮ ನಾಲ್ವರು ಶಿಕ್ಷಕರು ಸಹಕರಿಸಿ ದುಡಿದು ಹಗಲು ಇರುಳು ಎಂಬುದನ್ನು ಪರಿಗಣಿಸದೆ ಸದಾ ನನ್ನ ಬೆಂಬಲಕ್ಕಿದ್ದು ಕುದುರೆಮುಖ ಸಾಹಸವನ್ನು ಯಶಸ್ವಿಗೊಳಿಸಿದರು. ಅವರ ಉತ್ಸಾಹದ ಚಿಲುಮೆ ನಮಗೆಲ್ಲರಿಗೂ ನವಸ್ಫೂರ್ತಿ ನೀಡುವ ಚೈತನ್ಯವಾಗಿತ್ತು.

೧೨ನೇ ತಾರೀಕಿನಂದು ನಾವು ಎದ್ದಾಗ ೫ ಗಂಟೆ, ಸೆಕೆಯಳಿದು ಹಿತಕರವಾದ ಹವೆ, ನಿದ್ರೆಗೆ ಸೊಗಸಾಗಿ ಜೋಗುಳ ಹಾಡುವ ತಂಗಾಳಿ ಪಸರಿಸಿತ್ತು. ಆದರೆ ಕರ್ತವ್ಯವಿದೆಯಲ್ಲ. ಜಾಂಬ್ರೆ ಆಗಲೇ ಬಂದು "ಟೀ ರೆಡೀ ಸಾಬ್" ಎಂದು ಸೆಲ್ಯೂಟ್ ಮಾಡಿದ್ದ. ಅಡುಗೆಯವರು ಉಪಾಹಾರ ತಯಾರಿಸುತ್ತಿದ್ದರು. ಮಧ್ಯಾಹ್ನದ ಬುತ್ತಿಯನ್ನು (ಚಪಾತಿ, ಪಲ್ಯ) ತಿಮ್ಮಪ್ಪ, ಗುರು, ಶಾಸ್ತ್ರಿ, ಅಣ್ಣಯ್ಯಪ್ಪ ಕಟ್ಟುತ್ತ ಕುಳಿತಿದ್ದರು. ನೀರು ತರಲು ತೋಡಿನೆಡೆಗೆ ಒಂದು ತಂಡ ಹೊರಟಿತು. ಮೆಂಗಿಲ ಶೇಣವನ ಗುಂಪು, ಪೂಜಾರಿ ಎಲ್ಲರೂ ಆಗಲೇ ಸಿದ್ಧರಾಗಿದ್ದರು. ನಿಸಾರರೂ ನಾನೂ ಬಯಲಿನೆಡೆಗೆ ಹೋದೆವು. ಆಕಾಶ ವಿಶಾಲ, ನಿರಭ್ರ, ನಕ್ಷತ್ರಗಳ ದೇದೀಪ್ಯಮಾನ ಚಿತ್ರ ಅತಿ ಮೋಹಕವಾಗಿತ್ತು.

"ಗುರುಗಳೇ ಈ ನಕ್ಷತ್ರಗಳನ್ನು ಕುರಿತು ನೀವು ಸ್ವಲ್ಪ ನನಗೆ ಹೇಳಬೇಕು" ಎಂದರು ನಿಸಾರರು.

“ಕವಿಗಳಿಗೆ ಈ ಶುಷ್ಕ ವಾಸ್ತವಿಕತೆಯಿಂದ ಪ್ರಯೋಜನವೇನು?” ನಾನು ಕೆಣಕಿದೆ.
“ಛೇ ಛೇ! ಹಾಗೆಂದರೇನು? ವಾಸ್ತವಿಕತೆಯಿಂದ ಪ್ರಭಾವಿತನಾದ ಕವಿ ಮತ್ತೆ ಕಲ್ಪನಾಲೋಕದಲ್ಲಿ ಅದಕ್ಕೆ ಬೇರೆ ರೂಪವಿತ್ತು ಪುನಃ ವರ್ಣಿಸುತ್ತಾನೆ.”
“ಆಗಲಿ ಹೇಳುತ್ತೇನೆ. ನೀವು ನನಗೆ ಕವಿತೆ ಬರೆಯುವ ಡ್ರಿಲ್ಲನ್ನು ಹೇಳಿಕೊಡಬೇಕು.”
ನನ್ನ ಈ ಕೆಣಕು ನುಡಿ ಅವರಿಗೆ ಚುಚ್ಚಿತು. ಕವಿತೆ ಬರೆಯುವುದೂ ಒಂದು ಡ್ರಿಲ್ಲು, ಇನ್ನೊಬ್ಬನ ಆಜ್ಞೆಯನ್ನು ಹಿಂದೆ ಮುಂದೆ ಯೋಚಿಸದೇ ನಿರ್ವಹಿಸುವ ಒಂದು ಯಾಂತ್ರಿಕ ಥ್ರಿಲ್ಲು ಎಂದು ಸೂಚಿಸಿದ್ದು ಅವರದೇ ಒಂದು ಪದ್ಯದ ಭಾವವನ್ನು ತಿರುಗಾ ಮುರುಗಾ ಮಾಡಿ –

ಅಧಿಕಾರಿ ಬಂದೊಡನೆ ನನಗರಿಯದಂತೆಯೇ ಸಾರುವುದು
ಬಲಗೈ ಸಲಾಮು; ಪರತಂತ್ರ ನಾನಿನ್ನೂ,
ಹೊಟ್ಟೆಪಾಡ ಗುಲಾಮ

ಆ ಕಡೆಯಿಂದ ಶಿವಪ್ಪನವರ ಸಿಗರೇಟ್ ಕೇಳಿಸಿತು. ಸ್ವಾಮಿಯವರು ಟಾರ್ಚ್ ಲೈಟನ್ನು ಅಂಗುಲ ಅಂಗುಲಕ್ಕೆ ಬೀರುತ್ತ ಅಲ್ಲಿ ಯಾವ ತರದ ಉರಗವೂ ಇಲ್ಲವೆಂದು ಸ್ಪಷ್ಟ ಮಾಡಿಕೊಂಡನಂತರ ಮುಂದುವರಿದು ಬರುತ್ತಿದ್ದರು.
“ಎಲೈ ವನಸ್ಥಳಂಗಳಿರ! ಎಲೈ ಕಾಡುಮೃಗಂಗಳಿರ! ಎಲೈ ಉರಗಂಗಳಿರ ಲಾಲಿಸಿರಿ! ಮಹಾಸ್ವಾಮಿ ಕೆಂಡಗಣ್ಣಸ್ವಾಮಿಯವರಿಲ್ಲಿರ್ಪನ್ನವರೆಗೀಕ್ಷೇತ್ರಂ ನಿಮಗೌಟಾಫ್ ಬೌಂಡ್ಸ್ – ಲಕ್ಷ್ಮಣನ ಗೀಟನ್ನಿಲ್ಲಿ ಎಳೆದಿರ್ಪೆಂ. ನೀಮೇನಾದರೂಮಿತ್ತ ಆಗಮಿಸುತ್ತಿರ್ಪೊಡೆ ‘ಉರಗಂ ನಾಂ ಬರುತಿರ್ಪೆಂ’ ಎಂದು ಕೂಗಿ ಬಂದಪುದು...” ಎಂದು ಮಂತ್ರಘೋಷವನ್ನು ಶಿವಪ್ಪ ಬಜಾಯಿಸಿದರು.
“ಏನೋ ಶಿವಪ್ಪ! ನೀನು ಮಹಾಶೂರ. ನಿನ್ನೆ ರಾತ್ರಿ ಆ ಮಾವಿನ ಮರದವರೆಗೆ ಹೋಗಿಬರಬೇಕಾದರೆ ಹಿಂದೊಬ್ಬ ಮುಂದೊಬ್ಬ ನಿನಗೆ. ನೀನೇನು ನನ್ನನ್ನು ಚೇಷ್ಟೆ ಮಾಡುವುದು?” ಸ್ವಾಮಿ ಮಾರ್ನುಡಿದರು. ಫಲಿತಾಂಶವಿಷ್ಟೇ: ಇಬ್ಬರ ಹೂರಣವೂ ಹೊರಬಿತ್ತು.

ಶಿಬಿರ ಅಷ್ಟರಲ್ಲಿಯೇ ಜೀವ ಸ್ಪಂದನದಿಂದ ಲಕಲಕಿಸುತ್ತಿತ್ತು. ಉಪಾಹಾರ ಮುಗಿಯಿತು. ಪ್ಯಾಕೆಟ್ ಲಂಚ್ ಕಟ್ಟಿಕೊಂಡು ಹೊರಡಬೇಕಾದವರು ಅದರ ಸಮೇತ ಹಾಜರಾದರು. ಮೂರು ಪಂಗಡಗಳಾಗಿ ಹುಡುಗರು ೬.೨೦ಕ್ಕೆ ನಿಂತರು. ಜನ, ಸಾಮಗ್ರಿ, ಆರೋಗ್ಯ ಎಲ್ಲವೂ ಕೂಲಂಕಷವಾಗಿ ಪರಿಶೀಲನೆಗೊಳಪಡಲು ಈ ೧೦ ಮಿನಿಟು ಅವಶ್ಯ. ತಡವಾಗಿ ಬರುವಾತನಿಗೆ ಈ ಅವಕಾಶ ಚುಚ್ಚಿ ಹೇಳುತ್ತದೆ “ನೀನು ತಡ, ನೀನು ಸೋಮಾರಿ” ಎಂದು.
ಜಮಾಲಾಬಾದಿಗೆ ಹೋಗಬೇಕಾದವರು ೧೧ ಮತ್ತು ೪ ಶಿಕ್ಷಕರು, ಹೀಗೆ ೧೫. ಕುದುರೆಮುಖದ ಸರಹದ್ದಿಗೆ ೧೧, ಶಿಬಿರದಲ್ಲಿ ೧೧. ಜಮಾಲಾಬಾದಿನ ತಂಡದಲ್ಲಿ ಮೂರು ಮಂದಿ ಕಡಿಮೆಯಿದ್ದರು. ಯಾರವರು?
ಮುಕುಂದನಿಗೆ ವಾಂತಿ, ತಲೆನೋವು ಎಂದು ಡಾಕ್ಟರರ ವಶದಲ್ಲಿದ್ದ. ಇನ್ನಿಬ್ಬರು? ಹಾಸಿಗೆ ಚಾ ಹೊತ್ತಿನಲ್ಲಿ ನೋಡಿದ್ದೆನೆಂದನೊಬ್ಬ. ಬೊಬ್ಬೆ ಹೊಡೆದು ಹೆಸರು ಹಿಡಿದು ಕೂಗಿದನಿನ್ನೊಬ್ಬ. ಆದರೆ ಆ ಹೆಸರಿನವನು ಅಲ್ಲಿಯೇ ಇದ್ದುದರಿಂದ “oversmart ಆಗದಿರು ಎಲೆ ನನ್ನ ಕಂದಾ!” ಎಂದು ಹೇಳಿಸಿಕೊಂಡ. ನನ್ನ ಹತ್ತಿರ ಹೇಗೂ ಹಾಜರು ಪಟ್ಟಿ ಇದೆಯಲ್ಲ. ಅವರ ಹೆಸರು ತಿಳಿಯಿತು.
೬.೨೫ಕ್ಕೆ ದೊರೆಗಳಿಗೆ ವರದಿಯೊಪ್ಪಿಸಿ ಆಯಿತು.
“ಆ ಇಬ್ಬರು ಹುಡುಗರು ಏನಾದರು?”
“ಸರ್, ಅವರನ್ನು ಹಾಸಿಗೆ ಚಾ ಹೊತ್ತಿನಲ್ಲಿ ಕಂಡವರು ಬಹಳ ಮಂದಿ ಇದ್ದಾರೆ. ಕಾಡಿಗೆಲ್ಲೋ ಹೋಗಿರಬೇಕು ವಿಚಾರಿಸುತ್ತೇನೆ.”
“ವಿಚಾರಿಸಿ ಅವರಿಗೆ ಶಿಕ್ಷೆ ನೀಡಬೇಕು. ಉಳಿದವರು ಮುನ್ನಡೆಯಲಿ.”
೬.೩೦ಕ್ಕೆ ಸರಿಯಾಗಿ ೧೨ನೇ ಮೈಸೂರು ಮೂರು ಭಾಗಗಳಾಗಿ ಕವಲೊಡೆದು ಹೊರಟಿತು. ನನ್ನ ಶಾಖೆಯಲ್ಲಿ (ಜಮಾಲಾಬಾದ್) ಇಬ್ಬರು ಕಡಿಮೆ. ನಾವು ಬಂಗ್ಲೆಯ ಅಂಗಳ ದಾಟುವಾಗ ಆ ಬುದ್ಧಿವಂತರಿಬ್ಬರೂ ಓಡಿ ಓಡಿ ಮೇಲುಸಿರು ಬಿಡುತ್ತ ಬಂದರು. ನಮ್ಮ ತಂಡವನ್ನು ಸೇರಲು ಅನುಮತಿ ಕೋರಿದರು. ತಾವು ಬಹಿರ್ದೇಶಕ್ಕೆ ಹೋಗಿದ್ದುದಾಗಿ ತಿಳಿಸಿದರು.
“ಮಿತ್ರರೇ! ೧೨ನೇ ಮೈಸೂರಿನ ಅರ್ಥಕೋಶದಲ್ಲಿ ಎರಡು ಪದಗಳಿಗೆ ಸ್ಥಾನವಿಲ್ಲ – ಒಂದು ತಡವಾಗುವಿಕೆ; ಇನ್ನೊಂದು ಆಯಾಸ. ಇದಕ್ಕೆ ಅಪವಾದವಾದ ನೀವು ಈ ಮೂರು ದಿವಸವೂ ಶಿಬಿರ ಕೈದಿಗಳಾಗಿ ದುಡಿಯಬೇಕು.”
“ಕೇವಲ ಒಂದು ಮಿನಿಟ್ ತಡ, ಸರ್.”
“ಮಹಾಸ್ವಾಮಿ! ತಡದಲ್ಲಿ ಎರಡು ಮಿನಿಟಿನ ತಡ, ಎರಡು ಗಂಟೆಯ ತಡ ಎಂದು ತರತಮವಿಲ್ಲ. ಪ್ರಪಾತದಂಚಿನಲ್ಲಿ ಅರ್ಧ ಇಂಚು, ಕಾಲು ಇಂಚು ಎಂದಿಲ್ಲ. ಒಂದೋ ನೀವು ಈ ಕಡೆ ಸುರಕ್ಷಿತವಾಗಿದ್ದೀರಿ, ಇಲ್ಲ, ಆ ಕಡೆ ಹೊಂಡದಲ್ಲಿ ಬಿದ್ದಿದ್ದೀರಿ; ತ್ರಿಶಂಕುತ್ವವಿಲ್ಲ. ಹಾಗೆಯೇ ಕಾಲದ ವಿಚಾರವೂ. ಕೇವಲ ಸೆಕೆಂಡುಗಳ ತಡವಾಗುವಿಕೆಯಿಂದ ಯುದ್ಧಗಳೇ ಕಳೆದುಹೋಗಿವೆ.”

ಅವರನ್ನು ಸೇರಿಸಿಕೊಳ್ಳಲಿಲ್ಲ. ಹುಡುಗರಲ್ಲಿ ಅನೇಕರಿಗೆ, ಇದನ್ನೋದುವ ಹಲವರಿಗೆ, ಇಂಥ ನಿಷ್ಠುರತೆ ಅಗತ್ಯವೇ, ಹುಡುಗರೊಡನೆ ಸ್ವಲ್ಪ ಸಹನೆ, ತಾಳ್ಮೆಯಿಂದ ವರ್ತಿಸಬೇಡವೇ ಎಂದು ತೋರಿದರೆ ತಪ್ಪಿಲ್ಲ. ಜಾತ್ರೆಗೆ ಹೋಗುವಾಗ, ಮದುವೆ ಮುಂಜಿ ಮುಂತಾದ ಕೌಟುಂಬಿಕ ಸಂತೋಷ ಸಮಾರಂಭಗಳಲ್ಲಿ ಭಾಗಿಯಾಗುವಾಗ ತಡವಾಗಿ ಬರುವುದೂ ಚಂದ, ಅವ್ಯವಸ್ಥೆಯಿಂದ ನಡೆದುಕೊಳ್ಳುವುದೂ ಚಂದ, ಏನು ಮಾಡಿದರೂ ಮಾಡದಿದ್ದರೂ ಚಂದ. ಅಲ್ಲಿ ಪ್ರೀತಿ ವಿಶ್ವಾಸಗಳು ಪ್ರಧಾನವಾಗಿರುವ ಪ್ರಪಂಚ. ನಾವು ವ್ಯಕ್ತಿಗಳ ಭವಿಷ್ಯ, ಜೀವಗಳೊಡನೆ ಆಟವಾಡುವುದಿಲ್ಲ. ಇಲ್ಲಿ ಹಾಗಲ್ಲ, ಇದೊಂದು ಉಚ್ಚ ಮಿಲಿಟರಿ ಶಿಕ್ಷಣ ಶಿಬಿರ. ಆರಿಸಿ ಬಂದ, ಹೊಣೆ ಸಂಪೂರ್ಣ ಅರಿತು ಯಾರೊಡನೆ ಕಾರ್ಯವೆಸಗುತ್ತೇವೆ ಎಂದು ತಿಳಿದ ಕ್ಯಾಡೆಟ್ಟುಗಳ ತಂಡ. ಇಲ್ಲಿ ಶಿಸ್ತು, ಕ್ರಮಬದ್ಧತೆ, ನಿಯಮಪಾಲನೆ ಪ್ರಧಾನ; ಪ್ರೀತಿ ವಿಶ್ವಾಸ ಎರಡನೇ ಸ್ಥಾನ. ಇಂಥಲ್ಲಿ ತಪ್ಪಿಗೆ ಆ ಕ್ಷಣ ಶಿಕ್ಷೆ ಆಗದಿದ್ದರೆ, ಒಂದನೆಯದಾಗಿ, ವ್ಯವಸ್ಥೆಯ ಹಿಡಿತ ಸಡಿಲವಾಗುವುದು. ಎರಡನೆಯದಾಗಿ, ಸಂಬಂಧಿಸಿದ ಹುಡುಗರಿಗೂ (ಇತರರಿಗೂ) "ತಪ್ಪು ಮಾಡಿದರೂ ದಕ್ಕುತ್ತದೆ" ಎಂದು ಪರೋಕ್ಷವಾಗಿ ವಿಷದ ಬೀಜ ಬಿತ್ತಿದಂತಾಗುವುದು. ಇನ್ನೂ ಒಂದು ವಿಚಾರವಿದೆ – ಎಲ್ಲವೂ ಟಾಪ್ ಗಿಯರಿನಲ್ಲಿ ನಡೆಯಬೇಕಾದ ಇಂಥ ಪ್ರಸಂಗಗಳಲ್ಲಿ ಪ್ರತಿ ನಟ್ಟೂ ಬೋಲ್ಟೂ ಜಾಯಿಂಟೂ ಅದರದರ ಕಾಯವನ್ನು ಆಗಿಂದಾಗಲೇ ನಿರ್ವಹಿಸದಿದ್ದರೆ ಇಡೀ ಎಂಜಿನ್ ಕೆಟ್ಟು ನಿಂತು ಹೋಗುವುದು. ಇಬ್ಬರು ಹುಡುಗರು ತಡವಾಗಿ ಬಂದುದರಿಂದ ನಮ್ಮ ಎಷ್ಟು ಕಾಲ, ಸಹನೆ ಅಪವ್ಯಯವಾದುವು! ಕಾಲನಿಷ್ಠೆ, ಕ್ರಮಬದ್ಧ ಕಾರ್ಯ ನಿರ್ವಹಣೆ – ಇವೆರಡು ಜೀವನದ ವಿಶಿಷ್ಟ ರಂಗಗಳಲ್ಲಿಯೂ ಸರ್ವರಿಗೂ ಬಂದರೆ ದಾರಿದ್ರ್ಯ, ದುರ್ಭಿಕ್ಷೆ ಎಲ್ಲಿ ಉಳಿದಾವು?

# ಜಮಾಲಾಬಾದಿನ ಮಾನಸ ಸರೋವರ

**ಅಧ್ಯಾಯ ಹದಿನೇಳು**



ಕುದುರೆಮುಖ ಪರ್ವತ ಶ್ರೇಣಿಯ ಬುಡದಲ್ಲಿ ನಾವೂರು ಬಂಗ್ಲೆ. ಇದರ ಎತ್ತರ ಸಮುದ್ರ ಮಟ್ಟದಿಂದ ೪೮೦ ಅಡಿ. ಬಂಗ್ಲೆಯು ಶ್ರೇಣಿಗೆ ಮುಖ ಮಾಡಿದೆ. ಜಗಲಿಯ ಮೇಲೆ ನಿಂತು ಶ್ರೇಣಿಯನ್ನು ನೋಡುವಾಗ ಎಡಗಡೆಗೆ, ಅಂದರೆ ಬೆಳ್ತಂಗಡಿ ಕಡೆಗೆ ಜಮಾಲಾಬಾದ್ ಇದೆ. ಬೆಳ್ತಂಗಡಿಯಿಂದ ಜಮಾಲಾಬಾದಿಗೆ, ನಾವೂರು ಬಂಗ್ಲೆಯನ್ನು ಬಿಟ್ಟು, ನೇರ ಹೋಗುವುದು ಸಾಧ್ಯ. ಕುದುರೆಮುಖ ಶಿಖರದ ಎತ್ತರ ೬೨೫೭ ಅಡಿ, ಜಮಾಲಾಬಾದಿನ ಎತ್ತರ ೧೭೮೮ ಅಡಿ. ಬೆಳ್ತಂಗಡಿಯ ಎತ್ತರ ೪೫೦ ಅಡಿ. ಜಮಾಲಾಬಾದ್ ಒಂಟಿ ಹೆಬ್ಬಂಡೆ ನೀಳವಾಗಿ ಸೆಟೆದು ನಿಂತಂತೆ ಇರುವುದರಿಂದ ಬೆಳ್ತಂಗಡಿಯ ವಲಯದಲ್ಲಿ ಎಲ್ಲಿಯೇ ನಿಂತರೂ ಮೊದಲು ನಮ್ಮ ಗಮನ ಸೆಳೆಯುವುದು ಈ 'ಪೀಸಾ ನಗರದ ವಾಲುವ ಗೋಪುರ', 'ಪ್ಯಾರಿಸ್ ನಗರದ ಐಫೆಲ್ ಟವರ್'. ಇದರ ಹಿನ್ನೆಲೆಯ ಬಾನಪಟದಲ್ಲಿ ಕುದುರೆಮುಖ ಶ್ರೇಣಿ ಮತ್ತೆ ಗೋಚರಿಸುವುದು. ಆದರೆ ಕಣ್ಣ ಸಮೀಪದ ನುಸಿ ದೂರದ ಆನೆಗಿಂತ ನಮಗೆ ದೊಡ್ಡದಲ್ಲವೇ? ಬೆಳ್ತಂಗಡಿ ಕಡೆಯಿಂದ ನೋಡುವಾಗ ಜಮಾಲಾಬಾದಿನ ಬಲಭಾಗ ಬೋಳುಬಂಡೆ. ಅತಿ ನೆಟ್ಟಗೆ, ಗೂಳಿಯ ಬೆನ್ನ ಮೇಲಿನ ಡುಬ್ಬದಂತೆ ನಿಂತಿದೆ. ಅದರಿಂದ ಕ್ರಮೇಣ ಎಡಗಡೆಗೆ ಕಾಡು ಮರಗಳಿಂದ ಕೂಡಿದ ಇಳಿಜಾರು ಇದೆ. ಒಟ್ಟಾಗಿ ನೋಡುವಾಗ ಕುದುರೆಮುಖದೆಡೆಗೆ ಮುಖ ಮಾಡಿ ನಿಂತಿರುವ ಆನೆಯಂತೆ ಜಮಾಲಾಬಾದ್ ಕಾಣುವುದು. ಸಾವನದುರ್ಗಕ್ಕಿಂತ ಜಮಾಲಾಬಾದ್ ಸ್ವಲ್ಪ ಕಡಿಮೆ ಎತ್ತರ.

ನಾವೂರು ಬಂಗ್ಲೆಯಿಂದ ಜಮಾಲಾಬಾದಿನ ಬುಡದವರೆಗೆ ಕಾಲು ದಾರಿಯಲ್ಲಿ ಕಾಡುಗದ್ದೆಗಳ ಮೂಲಕ ೬ ಮೈಲು ನಡೆಯಬೇಕು. ನಮ್ಮ ಪಟಾಲಮ್ ೧೩ ಜನ ಸಮವಸ್ತ್ರಧಾರಿಗಳಾದ ಹುಡುಗರು, ಖಾನ್ವಿಲ್ಕರ್ ಮುಂದೆ, ಹಿಂದೆ ನಾನು. ಮಾರ್ಗದರ್ಶನ ಶೆರ್ಪಾ ನಮಗಿಂತೆಲ್ಲ ಮುಂದೆ, ಹೀಗೆ ನಡೆಯಿತು. ಸಾಲಾಗಿ ನಾವು ಆ ಶುಭ ಪ್ರಾತಃ ಕಾಲ ನಡೆಯುತ್ತಿದ್ದಾಗ, ಆ ಚೇತನದ ತುಂಬು ಹೊಳೆಯಲ್ಲಿ ತೇಲುತ್ತಿದ್ದಾಗ, ದಾರಿಯೇ ನಮ್ಮ ಕಾಲಡಿಯಲ್ಲಿ ಜಾರಿ ಹೋಗುತ್ತಿದ್ದಂತೆ ಭಾಸವಾಗುತ್ತಿತ್ತು. ತೆಂಗಿನ ಮರಗಳು ಗೌರವ ರಕ್ಷೆ ನೀಡಿದುವು. ಬಾಳೇ ಗಿಡಗಳು ಉದ್ದವಾದ ಎಲೆಗಳನ್ನು ಮೇಲೆ, ಕೆಳಗೆ ತೊನೆದಾಡಿಸಿ ಬೀಸಣಿಗೆ ಬೀಸಿದುವು. ಕಾಡು ಗುಲಾಬಿ, ಗೋರಟೆ, ಕಣಗಿಲೆ ಹೂಗಳ ಮಿಶ್ರ ಚಿತ್ರ, ಅನಾನಸಿನ ಸಾಲುಗಳ ವರ್ಣವೈವಿಧ್ಯ ಕಣ್ಣಿಗೆ ಹಬ್ಬ. (ನನ್ನ ಕಣ್ಣಿನಿಂದ ತಪ್ಪಿಸಿದವರಿಗೆ ಬಾಯಿಗೂ ಸಹ!) ದನಕರುಗಳು ಹೆದರಿ ಓಡಿದುವು. ನಾಯಿಗಳು ಬೊಗಳಿ ಬಾಲ ಮಡಚಿ ನಾಗಾಲೋಟಕಿತ್ತುವು. ಬೇಸಾಯಗಾರರು ಕುತೂಹಲದಿಂದ ಮನೆಗಳಿಂದ ಹೊರಗೆ ಬಂದು ನಿಂತು ನಮ್ಮನ್ನು ದಿಟ್ಟಿಸಿದರು.

"ಜಮಾಲಾಬಾದುಕು ನಾಣ ಏತು ದೂರ ಉಂಡಿಯೇ" ಎಂದು ಮುರುಕು ತುಳುವಿನಲ್ಲಿ ತಾತಯ್ಯನೊಬ್ಬನನ್ನು ಪ್ರಶ್ನಿಸಿದಾಗ, "ಗಡಾಯಿಕಲ್ಲೋ ಸ್ವಾಮೀ? ಅದು ಓ ಇಲ್ಲಿಯೇ" ಎಂದು ಅವನು ಶುದ್ಧ ಕನ್ನಡದಲ್ಲಿಯೇ ಉತ್ತರವಿತ್ತ.
ಆದರೆ ನಮ್ಮ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ. ನಮ್ಮ ಎದುರು ಅದು 'ದಿಟ ಪ್ರಶ್ನೆ, ದಿಟ್ಟ ಪ್ರಶ್ನೆ'ಯಾಗಿ ನಿಂತಿದೆ. ದೂರ ಎಷ್ಟು? ಒಂದು ಮೈಲೇ ಎರಡು ಮೈಲೇ ಎಂದು ತಿಳಿಯಲು ಪ್ರಶ್ನಿಸಿದರು, "ಓ ಇಲ್ಲಿಯೇ" ಉತ್ತರ. ಹಳ್ಳಿಗರ ಓ ಇಲ್ಲಿಯೇ ಅಳತೆಗೋಲಿನ ಉದ್ದ ೨ ಫರ್ಲಾಂಗಿನಿಂದ ೨ ಮೈಲಿಯವರೆಗೆ ಎಷ್ಟೂ ಆಗಬಹುದು.

ಆ ಮನೆಗಳ ಸ್ವಚ್ಛತೆ, ಅಂಗಳ ನೆಲಗಳ ಚೊಕ್ಕಟತನ, ಅಂಗಳದ ಕರೆಯಲ್ಲಿ ಓರಣವಾಗಿ ಮೆದೆಯೊಟ್ಟಿದ್ದ ಹುಲ್ಲುಮುಂಡ, ಅದರ ಬದಿಗಿದ್ದ ತೊಂಡೆ, ಬಸಳೇ ಚಪ್ಪರ, ಸಣ್ಣ ಹೂದೋಟ – ಇವೆಲ್ಲ ತುಂಬ ಆಕರ್ಷಣೀಯವಾಗಿದ್ದುವು. ಬಡತನವೋ ಸಿರಿವಂತಿಕೆಯೋ ನಾಗರಿಕತೆಯೋ ಅಲ್ಲವೋ ಬದುಕನ್ನು ಅಚ್ಚುಕಟ್ಟಾಗಿ ರೂಪಿಸಿಕೊಂಡಿದ್ದವರಿವರು ಎಂಬುದು ತಿಳಿಯಿತು. ಬೆಂಗಳೂರಿನ ನಮ್ಮ ಹುಡುಗರಿಗೆ ಇದು ಹೊಸ ಅನುಭವ.

ಜಮಾಲಾಬಾದ್ ಅಥವಾ ಸ್ಥಳೀಯರ ಭಾಷೆಯಲ್ಲಿ ಗಡಾಯಿಕಲ್ಲು ಇತಿಹಾಸಪ್ರಸಿದ್ಧವಾದ ಒಂದು ಗಿರಿದುರ್ಗ. ಇಂಪಿರಿಯಲ್ ಗಜೆಟಿಯರಿನಲ್ಲಿ ಇದರ ಬಗ್ಗೆ ಉಲ್ಲೇಖವಿದೆ (೧೯೦೮): "೧೭೮೮ ಅಡಿ ಎತ್ತರಕ್ಕೆ ನೇರವಾಗಿ ನಿಂತಿರುವ ಕಡಿದಾದ ಬಂಡೆಯಿದು. ಕುದುರೆಮುಖ ಸಾಲಿನಿಂದ ಪ್ರತ್ಯೇಕವಾಗಿ ನಿಂತಿದೆ. ೧೭೮೪ರಲ್ಲಿ ಮಂಗಳೂರಿನಿಂದ ಮರಳುತ್ತಿದ್ದ ಟಿಪ್ಪು ಸುಲ್ತಾನನು ಈ ಬಂಡೆಯ ಸ್ಥಾನ, ದುರ್ಗಮತೆಗಳನ್ನು ಅನುಲಕ್ಷಿಸಿ ಇದರ ಮೇಲೊಂದು ಕೋಟೆ ನಿರ್ಮಿಸಿ ಭದ್ರಪಡಿಸಿದ. ಅವನ ಪ್ರೀತಿಯ ತಾಯಿ ಜಮಾಲಾಬಾಯಿಯ ನೆನಪಿಗಾಗಿ ಇದನ್ನು ಜಮಾಲಾಬಾದ್ ಎಂದು ಹೆಸರಿಸಿದ. ಇದರ ತಳದಲ್ಲಿರುವ ಪಟ್ಟಣವನ್ನು ತನ್ನ ಪ್ರತಿನಿಧಿ ಅಧಿಕಾರಿಯ ನಿವೇಶನವಾಗಿ ಮಾಡಿದ. ಇದರ ಹೆಸರು ನರಸಿಂಹ ಅಂಗಡಿ. ಅದು ಈಗ ಉಳಿದಿಲ್ಲ. ೧೭೯೯ರಲ್ಲಿ ಬ್ರಿಟಿಷರು ಈ ಗಿರಿದುರ್ಗವನ್ನು ಸ್ವಾಧೀನಪಡಿಸಿಕೊಂಡರು. ಆದರೆ ಮುಂದೆ ಸ್ವಲ್ಪ ಅವಧಿಯಲ್ಲಿ ಅದು ಅವರ ಕೈಯಿಂದ ತಪ್ಪಿಹೋಗಿ ವಿರೋಧಿ ಗುಂಪಿನವರ ಕೈವಶವಾಯಿತು. ಮುಂದಿನ ಮೂರು ತಿಂಗಳ ದೀರ್ಘ ಕಾಲ ಈ ಕೋಟೆಯ ಸುತ್ತಲೂ ಮುತ್ತಿಗೆ ಹಾಕಿ ಪ್ರತಿಬಂಧಿಸಿದುದರ ಪರಿಣಾಮವಾಗಿ ಮೇಲಿನವರು ಶರಣಾಗತರಾಗ ಬೇಕಾಯಿತು. ಇದು ನಡೆದುದು ೧೮೮೦ರಲ್ಲಿ."

ಇನ್ನೊಂದು ಪುಸ್ತಕದಲ್ಲಿ (ಸೌತ್ ಕೆನರಾ ಡಿಸ್ಟ್ರಿಕ್ಟ್ ಮ್ಯಾನುಯಲ್) ಇನ್ನಷ್ಟು ವಿವರವಿದೆ: "ಕದಂಬರ ಸಂತತಿ ನಿರ್ನಾಮಹೊಂದಿದ ಅನಂತರ ಬಂದ ತೌಳವ ಪ್ರಭುತ್ವದಲ್ಲಿ ನರಸಿಂಹನೆಂಬ ಬ್ರಾಹ್ಮಣನು ಪ್ರಭುತ್ವದ ಸ್ಥಳೀಯ ಪ್ರತಿನಿಧಿ (ಗವರ್ನರ್) ಆಗಿದ್ದ. ಅವನ ಅರಮನೆ ಕಲ್ಲಿನ ಬುಡದಲ್ಲಿತ್ತು. ಅದರ ಅವಶೇಷ ಈಗ ಏನೂ ಇಲ್ಲ. ಈ ಪ್ರದೇಶ ನರಸಿಂಹನ ಹೆಸರಿನಿಂದಲೇ ಪ್ರಸಿದ್ಧವಾಯಿತು. ಅತ್ಯುನ್ನತ ಮತ್ತು ಕಡಿದಾದ ಕಲ್ಲಿನ ಮೇಲೆ ಇರುವ ದುರ್ಗ. ಅಪಾಯದ ಒಂದು ಕಿರುದಾರಿಯ ವಿನಾ ಬೇರೆಲ್ಲ ಕಡೆಗಳಿಂದಲೂ ಅಗಮ್ಯ. ಈ ದಾರಿಯ ದುರ್ಗದ ಮೇಲೆ ಕುಳಿತವರ ದೃಷ್ಟಿಯ ಅಡಿಯಲ್ಲಿಯೇ ಇದೆ. ಆದ್ದರಿಂದ ದುರ್ಗವನ್ನು ಕಿರುದಾರಿ ಮೂಲಕ ಏರುವುದು ಅಥವಾ ಇಳಿಯುವುದು ಅತ್ಯಪಾಯದ ಮಾರ್ಗ. ಮೇಲೆ ಕುಳಿತ ಸೈನ್ಯದ ಒಂದು ಪುಟ್ಟ ತುಕ್ಕಡಿಯೂ ಕೆಳಗಿನ ಪಟಾಲಮ್ಮನ್ನೇ ನಡುಗಿಸಬಹುದು."



ಜಮಾಲಾಬಾದ್ ಗಡಾಯಿ ಹಳ್ಳಿಯಲ್ಲಿರುವುದರಿಂದ ಅಲ್ಲಿಯವರ ಭಾಷೆಯಲ್ಲಿ ಇದರ ಹೆಸರು ಗಡಾಯಿಕಲ್ಲು. ಬಯಲು ಮುಗಿದು ಕ್ರಮೇಣ ಏರು ಪ್ರಾರಂಭವಾಗುವಾಗ ಇಂದು ಮಹಾ ಪ್ರವೇಶದ್ವಾರ ನಮ್ಮನ್ನು ಸ್ವಾಗತಿಸುವುದು. ಕಲ್ಲು ಚಪ್ಪಡಿಗಳಿಂದ ನಿರ್ಮಿತವಾದ ಈ ಬಾಗಿಲು ಈಗ ಹಾಳುಗರೆಯುತ್ತಿದೆ. ನಮ್ಮ ತಂಡದ ಇತಿಹಾಸ ದಫ್ತರ ಕೀಟಗಳಾದ ಜಯರಾಜ, ಅಣ್ಣಯ್ಯಪ್ಪ ಜಮಾಲಾಬಾದಿನ ಗತವೈಭವವನ್ನು ಕುರಿತು ಭವ್ಯ ಗ್ರಂಥ ಬರೆಯುವ ದಿವ್ಯ ಯೋಜನೆಗೆ ವಿಷಯ ಸಂಗ್ರಹ ಮಾಡಬೇಕೆಂದು ನಿರ್ಧರಿಸಿದ್ದಾರೆ. ಇನ್ನು ರಸಾಯನ ವಿಜ್ಞಾನ ಭಯಂಕರ ಅನಂತರಾಜು ಮತ್ತು ರಾಮಶಿವಣ್ಣ ಜಮಾಲಾಬಾದ್ ಇಡೀ ಕಬ್ಬಿಣದ ಅದುರಿನಿಂದ ತುಂಬಿರಬಹುದೇ ಎಂದು ಸಂದೇಹಿಸುತ್ತಿದ್ದಾರೆ. ಅವರ ವರದಿ ಕುದುರೆಮುಖ ತಪ್ಪಲಿನ ಕಬ್ಬಿಣದ ಅದುರಿನ ವಿಚಾರದಲ್ಲಿ ಜಪಾನೀ ತಜ್ಞರು ಮಂಡಿಸಿರುವ ವರದಿಗಿಂತ ಅಧಿಕ ವಿಸ್ತೃತವೂ ಬೃಹತ್ತೂ ಆಗುವ ಲಕ್ಷಣವಿದೆ. ಭೂಗರ್ಭ ವಿಜ್ಞಾನಸಮುದ್ರ ತಿಮಿಂಗಿಲ ಜಗನ್ನಾಥ ಶಾಸ್ತ್ರಿ ಮತ್ತು ರಂಗನಾಥ ಜಮಾಲಾಬಾದ್ ಅಗ್ನಿ ಪರ್ವತವಾಗಿದ್ದಿರಬಹುದೇ, ಎಂದು ಇದು ಭೂಗರ್ಭದಿಂದ ಹೊರಕ್ಕೆ ಚಾಚಿತು, ಆದ್ದರಿಂದ ಭೂಮಿಯ ವಯಸ್ಸೇನು ಎನ್ನುವ ಘನ ಸಮಸ್ಯೆಯ ಪರಿಹಾರಕ್ಕಾಗಿ ನಾನಾ ಬಗೆಯ ಕಲ್ಲು, ಮುಳ್ಳು ಸಂಗ್ರಹಿಸಿ ಅವುಗಳ ಮಧ್ಯೆ ಸಿಕ್ಕಿ ಹಾಕಿಕೊಂಡು ಹೊರಗೆ ಬರುವ ಹಾದಿ ಹುಡುಕುತ್ತಿದ್ದಾರೆ. ಚಂದ್ರಮಂಡಲಕ್ಕೆ ಜಿಗಿಯಲು ಜಮಾಲಾಬಾದಿನ ಶಿಖರ ಅಮೆರಿಕಾದ ಕೇಪ್ ಕೆನ್ನೆಡಿಗಿಂತಲೂ

ಉತ್ತಮವಲ್ಲವೇ ಎಂಬ ವಿಚಾರ ಪ್ರಭಾಕರ ರೆಡ್ಡಿಯನ್ನು ಪೀಡಿಸುತ್ತಿದೆ. ಉಳಿದ ಪಾಮರರಿಗೆ ಕಂಡದ್ದು ಇಷ್ಟು – ದುರ್ಗದ ಅವಶೇಷವಾಗಿ ಅಲ್ಲಲ್ಲಿ ಮೆಟ್ಟಲುಗಳು, ಕಡಿದಾದ ಏರು, ಶಿಖರದಿಂದ ಸ್ವಲ್ಪ ಕೆಳಗೆ ಒಂದು ಪ್ರವೇಶದ್ವಾರ ಮತ್ತು ವಾಸಯೋಗ್ಯವಾದ ಕಲ್ಲಿನ ಮನೆ ಇವೆ. ಅದರ ಗೋಡೆಗಳು ಮಾಮೂಲಿನಂತೆ ಅದುವರೆಗೆ ಬಂದಿದ್ದ ಅಸಂಖ್ಯಾತ ಪ್ರವಾಸಿಗಳ ಕೆತ್ತನೆ ಕೆಲಸಗಳಿಂದ, ಚಿತ್ರದ ಕುಸುರುಗಳಿಂದ ಶೋಭಿಸುತ್ತಿದ್ದುವು. ಕೂಲಂಕಷವಾಗಿ ಪರಿಶೀಲಿಸಿದಾಗ ೧೯೫೫ರಿಂದ ಹಿಂದೆ ಯಾವ ಪ್ರವಾಸಿಗನೂ ಅಲ್ಲಿಗೆ ಬಂದಿದ್ದುದು ಉಲ್ಲೇಖಿತವಾದದ್ದು ಕಾಣಲಿಲ್ಲ. “ಹಾಗಾದರೆ ೧೯೫೦ರಿಂದೀಚೆಗೆ ಮಾತ್ರ ಜನ ಬಂದಿರಬಹುದೇ?” ಎಂದು ಸಂಶೋಧಕ ಮನಃಪ್ರವೃತ್ತಿಯ ಶ್ರೀಧರ ಪ್ರಶ್ನಿಸಿದ. “ಅದರರ್ಥ ಹಳೆಯ ದಫ್ತರಗಳ ಮೇಲೆ ಹೊಸ” ದಫ್ತರ ಕುಳಿತಿದೆ. ವಾಸಾಂಸಿ ಜೀರ್ಣಾನಿ...”

ಬೆಟ್ಟದ ತುಂಬ ಬೆಳೆದಿದ್ದ ಹುಲ್ಲಿಗೆ ಬೆಂಕಿ ಬಿದ್ದಿದ್ದುದರಿಂದ ಬಂಡೆ ಬೋಳಾಗಿತ್ತು. ಒಂದು ಪಾರ್ಶ್ವ ಮಾತ್ರ ಕುರುಚಲು ಕಾಡು ತುಂಬಿತ್ತು. ಮೆಟ್ಟಲು ದಾರಿಗಿಂತ ಅಂಕುಡೊಂಕು ದಾರಿಯೇ ಹಿತವಾಯಿತು. ಬೆಟ್ಟ ಏರುವಾಗ ಮೆಟ್ಟಲುಗಳ ನಿಯಂತ್ರಿತವಾದ ನಡಿಗೆ ಕಾಲುಗಳಿಗೆ ಬೇಗ ನೋವುಂಟುಮಾಡುವುದು. ಬದುಕು ಕೂಡ ಹಾಗೆಯೇ – ಎಲ್ಲವೂ ಡ್ರಿಲ್ಲಾದರೆ ಜೀವನ ನೀರಸ ಮತ್ತು ಭಾರವಾಗುವುದು ಎಂದು (ಮರುದಿನ ಹೋಗಿಬಂದ) ನಿಸಾರರು ಹೇಳಿದರು. ಮೇಲೆ ಮೇಲೆ ಏರಿದಂತೆ ನಮ್ಮ ದಿಗಂತ ಇನ್ನಷ್ಟು ವಿಸ್ತಾರವಾಯಿತು. ಗದ್ದೆ, ಬಯಲು, ತೋಟ, ಕೆರೆ, ಹೊಳೆ, ಮನೆ, ಗುಡ್ಡ ಎಲ್ಲವೂ ಪರದೆಯ ಮೇಲೆ ಬಿಡಿಸಿದ ಚಿತ್ತಾರಗಳಾದುವು. ನಾವೂ ಬಂಗ್ಲೆ ಇನ್ನೊಂದು ಪುಟ್ಟ ಡುಬ್ಬದ ಆಚೆ ಬದಿಗೆ ಅಡಗಿಹೋಯಿತು. ೧೧ ಗಂಟೆಯ ಸುಮಾರಿಗೆ ನಾವು ಕೊಡಿ ತಲಪಿದೆವು. ಅಲ್ಲೇನಿದೆ? ಸುಟ್ಟ ನೊಜೆ ಹುಲ್ಲಿನ ಗಟ್ಟಿ ಬುಡಗಳು. ಕುಳಿತರೆ ಚುಚ್ಚುವುವು. ತಡೆಯಲಾಗದಷ್ಟು ಸೆಕೆ. ಆದರೂ ನಾವು ಸಾಧಿಸಿದ ಪ್ರಥಮ ವಿಜಯವೆಂದು ಸಂತೋಷ ಉಕ್ಕುತ್ತಿತ್ತು. ಹೊಗೆ ಬಾಂಬು ಸುಟ್ಟೆವು. ಮದ್ದುಗುಂಡು ಹೊಟ್ಟಿಸಿದೆವು. ೧೨ನೇ ಮೈಸೂರಿಗೆ ಜಯಕಾರ ಕೂಗಿದೆವು. ವಾಟರ್ ಬಾಟಲಿನಲ್ಲಿ ತಂದಿದ್ದ ನೀರು ಖರ್ಚಾಗಿ ಹೋಯಿತು. ದಾಹ ವಿಪರೀತ, ಮುಂದೆಲ್ಲಿಗೆ ಹೋಗುವುದು?

“ಓ ಇಲ್ಲಿಯೇ ನೀರು ಸಿಕ್ಕುತ್ತದೆ” ಎಂದ ನಮ್ಮ ಶೆರ್ಪಾ. “ಓ ಇಲ್ಲಿಯೇ” ಬೆಟ್ಟದ ಬುಡವೇ ಆಗಿರಬಹುದೆಂದು ನನಗೆ ಸಂದೇಹ. ಆದರೆ ಅವನು ತೋರಿಸಿದ್ದು ಶಿಖರದಿಂದ ಹಿಂದೆ ಸ್ವಲ್ಪ ತಗ್ಗಿನಲ್ಲಿ; ನಾವು ಬಂದ ಜಾಡಿನಲ್ಲಿ ಅಲ್ಲ. ಶಿಖರವನ್ನು ಆನೆಯ ನೆತ್ತಿಯೆಂದರೆ ನಾವು ಹತ್ತಿ ಬಂದ ಹಾದಿ ಮುಂಗಾಲು ಕಿವಿಗಳ ಎಡೆಗಾಗಿ. ಬೆನ್ನಿನ ಮೇಲೆ ಸ್ವಲ್ಪ ದೂರ ನಡೆದರೆ ನೀರ್ದಾಣವಿದೆಯೆಂದು ಅರ್ಥವಾಯಿತು. ಆ ಕಡೆ (ಕೆಳಗಿನಿಂದ ಕಾಣುತ್ತಿರಲಿಲ್ಲ) ತುಂಬ ಮರಗಿಡಗಳು ಸೊಂಪಾಗಿ ಬೆಳೆದಿದ್ದುದರಿಂದ ಆಸೆ ಚಿಗುರಿತು.

ಮುಂದೆ ಎರಡು ಫರ್ಲಾಂಗ್ ನಡೆದು ಒಂದು ಇರುಕಿನೊಳಗೆ ಇಳಿದೆವು. ಅಲ್ಲಿಯೇ ಮಾಯಾಲೋಕ ಫಕ್ಕನೆ ಮಿಂಚಿತು. ತಿಳಿಗೊಳ. ಸುತ್ತಲೂ ಹೆಬ್ಬಂಡೆಗಳ ಕಡಿದಾದ ಗೋಡೆ ಸೃಷ್ಟಿನಿರ್ಮಿತ. ಹೆಬ್ಬಂಡೆಗಳನ್ನು ತಾಗಿ ಮರಗಾಡು. ಒಂದು ದಂಡೆಯ ಮರಗಳ ಕೊಂಬೆಗಳು ಎದುರು ದಂಡೆಯ ಮರಗಳ ಕೊಂಬೆಗಳೊಡನೆ ಸೇರಿ ಹೆಣೆದು ಅಲ್ಲೊಂದು ಹಸುರು ಹಂದರ ಹಾಸಿದಂತಾಗಿತ್ತು. ಅದರಡಿಯಲ್ಲಿ ತಂಪು, ನೀರವ, ನೀರಿನಾಸರೆ. ಹುಡುಗರ ಉತ್ಸಾಹಕ್ಕೆ ಮಿತಿಯಿಲ್ಲ. ಇಂಥ ಸಂದರ್ಭದಲ್ಲಿಯೇ ಒತ್ತಬೇಕು ಶಿಸ್ತಿನ ಬಿರಿಯನ್ನು – ಬಲವಾಗಿಯೇ. ಮೊದಲೇ ಮಂಗಗಳು: ಮತ್ತೆ ದಣಿವು, ದಾಹ. ಮೇಲೆ ಅನಾಯಾಸವಾಗಿ ಎದುರಾದ ಅಚ್ಛೋದ ಸರೋವರ. ಯಕ್ಷಪ್ರಶ್ನಾ ಪ್ರಸಂಗದ ಪೂರ್ವಾರ್ಧದ ಪುನರಾವರ್ತನೆ ಆಗಬೇಡವೆಂದಿದ್ದರೆ ಲಗಾಮನ್ನು ಬಲವಾಗಿಯೇ ಜಗ್ಗಬೇಕು.

“ನೀರಿಗೆ ಯಾರೂ ಇಳಿಯತಕ್ಕದ್ದಲ್ಲ. ಬಕೆಟಿನಲ್ಲಿ ನೀರು ತಂದು ದಂಡೆಯಿಂದ ದೂರನಿಂತು ಕೈ ಮುಖ ತೊಳೆಯತಕ್ಕದ್ದು ಮತ್ತು ಸೋಸಿ ನೀರು ಕುಡಿಯಬಹುದು” ಇದು ನನ್ನ ಆಜ್ಞೆ.
“ಕ್ರೂರ ನಕ್ರಾಕುಲದೊಳಿಡಿದಿರ್ದ ಪೆರ್ಮಡು ಗಭೀರ ನಿರ್ಮಲ ಜಲದೊಳೆಸೆವಂತೆ” ಆ ಕೊಳವಿತ್ತು. ನಮ್ಮ ‘ಅಚ್ಚ ಸಂಸ್ಕೃತಿ’ಯ ಸಲ್ಲಕ್ಷಣವೆಂದರೆ ನೀರು ಕಂಡೊಡನೆ ಹಿಂದೆ ಮುಂದೆ ನೋಡದೆ ಅದಕ್ಕೆ ದುಮುಕಬೇಕು. ಬೇರೆಯವರ ಕಷ್ಟ ಸುಖದ ಪರಿವೆಯಿಲ್ಲದೇ ನಮ್ಮ ವಿಶಿಷ್ಟ ಪ್ರವೃತ್ತಿಗಳನ್ನೂ ಅಲ್ಲಿಯೇ ನಿರ್ವಹಿಸಬೇಕು. Vandalism is our national trait. ನಾನು ಕಠಿಣವಾಗಿ ಹೀಯಾಳಿಸುತ್ತಿದ್ದೇನೆ ಎಂದು ನಿಮಗೆ ಕಂಡರೆ ದಯವಿಟ್ಟು ನಮ್ಮ ಪುಣ್ಯ ಕ್ಷೇತ್ರಗಳಿಗೆ ಹೋಗಿ ನೋಡಿ. ಅಲ್ಲಿಯ ಕೆರೆ, ಕೊಳ, ಹೊಳೆಗಳನ್ನು ಸಂದರ್ಶಿಸಿ ಬನ್ನಿ. ಅಲ್ಲಿಯ ಪ್ರವಾಸೀ ಮಂದಿರಗಳಲ್ಲಿ ಉಳಿದಿದ್ದು ಅನುಭವಿಸಿ. ಭಗವದ್ಭಕ್ತಿಯೂ ಸಾಮಾಜಿಕ ಶುಚಿತ್ವ ಪ್ರಜ್ಞೆಯೂ ಪರಸ್ಪರ ಸಂಬಂಧವಿಲ್ಲದವು ಎಂದು ನಮ್ಮ ಜನ ತಿಳಿದಿರುವಂತೆ ತೋರುವುದು.

ಆ ಸಮಯದಲ್ಲಿ ಒಂದು ಹಳೆಯ ಕತೆ ನೆನಪಿಗೆ ಬಂದಿತು. ಗಂಭೀರವಾಗಿ ಹೇಳಿದೆ, “ನಾನು ಇಲ್ಲಿಯ ಸ್ಥಳಪುರಾಣವನ್ನೂ ಮಹಿಮೆಯನ್ನೂ ಅಭ್ಯಸಿಸಿ ಬಂದಿದ್ದೇನೆ. ಆ ಪ್ರಕಾರ ಈ ಕೊಳವನ್ನು ಮಹರ್ಷಿ ಋಷ್ಯಶೃಂಗರು ನಿರ್ಮಿಸಿದ್ದಂತೆ. ಇದರ ವೈಶಿಷ್ಟ್ಯವೇನೆಂದರೆ ಬಲದಂಡೆಯ ನೀರು ಬಲು ಸವಿ. ಅದನ್ನು ಮಾತ್ರ ಕುಡಿಯಿರಿ. ಎಡದಂಡೆಯ ನೀರು ಚಪ್ಪೆ, ರುಚಿಯಿಲ್ಲ.”
ಬಲದಂಡೆಯ ನೀರನ್ನು ತಂದಾಯಿತು. ಬಾಯಿಯಿಂದ (ಮೋಟಾರ್ ಎಂಜಿನ್ನಿನ ರೇಡಿಯೇಟರಿನಿಂದ) ನೀರು ತುಳುಕುವವರೆಗೆ ಅದನ್ನು ಕುಡಿದರು ಹುಡುಗರು. ಏದುತ್ತ ಸೇಂಕುತ್ತ, “ಹೌದು ಸರ್ ಬಹಳ ಸವಿ” ಎಂದು ಬಾಯಿ ಚಪ್ಪರಿಸಿದರು. ಬುತ್ತಿಯುಂಡಾಯಿತು. ಆ ಚಪಾತಿ



ಬಟಾಟೆ ಪಲ್ಯ, ಆ ಮೂಸುಂಬಿ, ಆ ಸನ್ನಿವೇಶ, ಆ ಸವಿನೀರು ಅದರ ರುಚಿ ಅಲ್ಲಿಗೇ ಮೀಸಲು. ದೇಹ, ಮನಸ್ಸು ತಣಿದನಂತರ, "ಈಗ ಎಡದಂಡೆಯ ನೀರನ್ನು ಬೇಕಾದರೆ ಕುಡಿದು ಪರೀಕ್ಷಿಸಿ" ಎಂದೆ.
ಕುಡಿದವರು, "ಬರೀ ಚಪ್ಪೆ, ಏನೂ ರುಚಿಯಿಲ್ಲ."
ಅವರಿಗಚ್ಚರಿ. ಒಂದೇ ಕೊಳ, ಎರಡು ಬಗೆಯ ರುಚಿಗಳ ನೀರು? ನನ್ನನ್ನು ಪ್ರಶ್ನಾರ್ಥಕವಾಗಿ ದಿಟ್ಟಿಸಿದರು. ನಾನೆಂದೆ "ಹಸಿವು ಸವಿ, ತೇಗು ಅಲ್ಲ."

೧೨ ಗಂಟೆ ದಾಟಿತ್ತು. ಇನ್ನು ಹಾರಾಟ ನಡೆಯಬೇಕಷ್ಟೆ. ನಮ್ಮ ತಂಡದ ಒಬ್ಬ ಪ್ರಮುಖ ಸದಸ್ಯ ವೆಂಕಟೇಶ. ಇವನು ಹಳೆಯ ಸ್ಕೌಟ್ ಹುಲಿ. ಅತ್ಯಂತ ತೀಕ್ಷ್ಣಮತಿ. ರೇಡಾರ್, ಟೆಲಿವಿಷನ್ ಉಪಕರಣಗಳನ್ನು ಸ್ವತಃ ತಯಾರಿಸಿರುವ ನಿಪುಣ. ಓದಿನಲ್ಲಿ ಹೇಗೋ ಹಾಗೆ ಎನ್‌ಸಿಸಿ ಚಟುವಟಿಕೆಗಳಲ್ಲಿಯೂ ಗಟ್ಟಿಗ. ಇವನ ಚುರುಕು ನಡೆ, ಮಿಂಚಿನಂಥ ಬುದ್ಧಿ, ಸತತ ಕ್ರಿಯಾಶೀಲತೆ ಇವನ್ನು ಕಂಡ ಸ್ನೇಹಿತರು ವೆಂಕಟೇಶನನ್ನು ಕಾಸ್ಮಿಕ್ ರೇ ಎಂದು ಅರ್ಥಪೂರ್ಣವಾಗಿ ಕರೆಯುತ್ತಿದ್ದರು. ಕಾಸ್ಮಿಕ್ ಎಂದೇ ಅವನನ್ನು ಕರೆಯುವುದು ರೂಢಿಯಾಗಿ ಹೋಯಿತು. ನಿಜವಾದ ಹೆಸರೇ ಮರೆತುಹೋಗುವಷ್ಟು ಪ್ರಬಲವಾಯಿತು ಈ ಅನ್ವರ್ಥನಾಮ.


ಹಗ್ಗಗಳ ಸಹಾಯದಿಂದ ಕೊಳ ದಾಟುವುದು

"ಇಲ್ಲೊಂದು ಹೊಸ ಪ್ರಯೋಗ ಮಾಡೋಣ ಸಾರ್" ಎಂದ ಕಾಸ್ಮಿಕ್. "ಮಾಡೋಣ" ಎಂದರೆ ತಾನು ಮಾಡುತ್ತೇನೆ, ಅನುಮತಿಯಿದೆಯೇ ಎಂದು ಅರ್ಥ.
"ಏನು ನಿನ್ನ ಯೋಜನೆ ವಿವರಿಸು" ಎಂದೆ.
"ರಿವರ್ ಕ್ರಾಸಿಂಗ್, ಸಾರ್."
"ರಿವರ್ ಎಲ್ಲಿದೆಯಯ್ಯ?"
"ನೀವೇನು ಸಾರ್? ಬೋರ್ಡಿನ ಮೇಲೆ ವಿಶ್ವದಗೋಳವನ್ನು ಗೀಚಿ let us imagine ಎಂದು ಖಗೋಳ ವಿಜ್ಞಾನವನ್ನೇ ಹೇಳಿಕೊಡುತ್ತೀರಿ. ಹಾಗಿರುವಾಗ!"
"ಆಗಲಿ ಅಷ್ಟು ಕಠಿಣವಲ್ಲ ಇಲ್ಲಿಯ ಕಲ್ಪನೆ. ಲೇಕ್ ಕ್ರಾಸಿಂಗ್ ಎಂದು ಬದಲಾಯಿಸಿರಿ ನಿಮ್ಮ ಯೋಜನೆಯ ಹೆಸರು."
"ಸರಿ ಸಾರ್. ಸರೋವರೋಲ್ಲಂಘನ" ಅವನು ಸಂಸ್ಕೃತ ಪಂಡಿತನೂ ಹೌದು.
"ಬಹಳ ಸುಲಭ. ಈ ದಂಡೆಯ ಮೇಲೆಯೇ ನಡೆದರೆ ಆ ಕಡೆಗೆ ತಲಪಿರುತ್ತೇವೆ. ಇದೇನು ಮಹಾ!"
"ನೀವೇನು ತಮಾಷೆ ಮಾಡುತ್ತೀರಿ, ಸಾರ್. ಹಗ್ಗ ಕಟ್ಟಿ ಈ ೪೦ ಅಡಿ ಉದ್ದದ ಕೊಳವನ್ನು ಹಗ್ಗದಡಿಯಲ್ಲಿ ಜಾರಿ ದಾಟೋಣ."
"ಆಗಲಿ ಮುಂದುವರಿಸಿ, ಆದರೆ ನಾನು ಹಸುರು ಕಂದೀಲು ತೋರಿಸದೇ ನೀವು ದಾಟಲು ತೊಡಗತಕ್ಕದ್ದಲ್ಲ."



ನಾವುಕುಳಿತಿದ್ದ ದಂಡೆಯಲ್ಲಿ ಕೊಳದಿಂದ ೨೦–೨೫ ಅಡಿ ಎತ್ತರದಲ್ಲಿ ಭದ್ರ ಮರವೊಂದರ ಕಾಂಡಕ್ಕೆ ಎರಡು ನೈಲಾನು ಹಗ್ಗಗಳನ್ನು ಬಿಗಿದು ಕಟ್ಟಿದರು. ಅವನ್ನು ದಂಡೆಯ ಮೇಲಕ್ಕಾಗಿ ಬಿಚ್ಚುತ್ತ ಕೊಂಡೊಯ್ದು ಎದುರು ದಂಡೆಯಲ್ಲಿ ೧೦ ಅಡಿ ಎತ್ತರದಲ್ಲಿ ಇನ್ನೊಂದು ಕಾಂಡಕ್ಕೆ ಬಿಗಿಯಾಗಿ ಕಟ್ಟಿದರು. ಈಗ ಇಳಿಜಾರಾದ ಹಗ್ಗದ ಸೇತುವೆಯೊಂದು ಕೊಳದ ಅಡ್ಡ ನಿರ್ಮಾಣವಾದ ಹಾಗಾಯಿತು. ಹಗ್ಗ ಭದ್ರವಾಗಿದೆಯೆಂದು ಸ್ಥಿರವಾದ ಬಳಿಗೆ ಮೊದಲು ಮೋಹನನ್ನು ಕೊಳ ದಾಟಲು ಬಿಡಲಾಯಿತು – ಕಾಸ್ಮಿಕ್ ನಿರ್ದೇಶಕ; ಲಕ್ಷ್ಮಿ ಮೊದಲಾದವರು ಸಹಾಯಕರು. ಪಿಂಟೋ, ಜಯರಾಮ ನನ್ನೊಡನೆ ದಂಡೆಯಲ್ಲಿ ಕುಳಿತು ನೋಡತೊಡಗಿದರು.

ಮೋಹನನ ಸೊಂಟಕ್ಕೆ ಒಂದು ಹಗ್ಗ ಸುತ್ತಿ ಅದನ್ನೂ ಹಗ್ಗದ ಸೇತುವೆಯನ್ನೂ ಕೆರಾಬಿನಾರಿನಿಂದ ಪೋಣಿಸಲಾಯಿತು. ಕೈಗಳಿಗೆ ಗವಸು. ಸೇತುವೆಯನ್ನು ಭದ್ರವಾಗಿ ಹಿಡಿದುಕೊಂಡು ತಲೆ ಮುಂದೆ ಕಾಲು ಹಿಂದಾಗಿ ನಿಂತು ಕಟ್ಟಿದ ಮರಕ್ಕೆ ಬಲವಾಗಿ ಒದ್ದು ಅವನು ಜಾರಲು ತೊಡಗಿದ. ಸೇತುವೆ ಇಳಿಜಾರಾಗಿದ್ದುದರಿಂದ ಇದು ಸಾಧ್ಯವಾಯಿತು. ಕೆರಾಬಿನರ್ ಮತ್ತು ಕೈಗಳು ಅವನನ್ನು ಭದ್ರವಾಗಿ ಸೇತುವೆಗೆ ಬಂಧಿಸಿವೆ. ಕಾಲುಗಳನ್ನು ನೆಟ್ಟಗೆ ಚಾಚಿದ. ಹೀಗೆ ಅಂಗಾತ ಮಲಗಿದ ಮೋಹನ ಜಾರಿಹೋಗುತ್ತಿದ್ದಂತೆಯೇ ಸೇತುವೆಯ ಹಗ್ಗದ ಬಿಗಿತ ಸಾಲದೇ ಅದು ಭಾರದಿಂದ ಜಗ್ಗಿತು. ಜಗ್ಗಿದ್ದು ಸ್ವಲ್ಪ ಹೆಚ್ಚೇ ಆಗಿ ಮೋಹನನಿಗೆ ನೀರಿನಲ್ಲಿ ಒಂದು ಮುಳುಗಾಟವಾಯಿತು. ಅವನ ಸಮವಸ್ತ್ರವೆಲ್ಲ ಒದ್ದೆ. ಎದುರು ದಂಡೆ ತಲಪಿಯೇ ಬಿಟ್ಟ. ಬಟ್ಟೆಯನ್ನು ಕಳಚಿ ಒಣಗಲು ಹರಗಿದ. ಮುಂದೆ ಸ್ನಾನ ಮಾಡದೇ ವಿಧಿಯಿರಲಿಲ್ಲ.

"ಸ್ನಾನ ಮಾಡಲಾ ಸಾರ್?"

"ನೀರಿನ ಆಳವೆಷ್ಟುಂಟೋ? ಗೊಸರಿರಬಹುದು. ಅದಿರಲಿ ನಿನಗೆ ಈಸಲು ಬರುವುದೋ?"

"ನನಗೆ ಬರುತ್ತದೆ" ಏಳೆಂಟು ಜನ ಕೂಗಿ ಹೇಳಿದರು.

ಶ್ರೀಧರನ್ ಇದ್ದವರಲ್ಲಿ ಧಾಂಡಿಗ. ಅವನು ಮೊದಲು ಈಸಬೇಕು, ಸೊಂಟಕ್ಕೆ ಹಗ್ಗ ಕಟ್ಟಿಕೊಂಡು ಅದನ್ನು ದಂಡೆಯಲ್ಲಿ ನಿಂತವರು ಬಿಲೇ ಮಾಡಬೇಕು. ಶ್ರೀಧರನ್ ಕೊಳದ ಬೇರೆ ಬೇರೆ ಭಾಗಗಳಲ್ಲಿ ನಿಂತು ನೀರಿನ ಆಳ ತಿಳಿಸಬೇಕು. ಇದು ಮುಂದಿನ ಯೋಜನೆ. 'ಹುಡುಗರ ತಂಡದೊಡನೆ ಹೋದಾಗ ನೀರು ನಿಮ್ಮ ಪ್ರಥಮ ವೈರಿ' ಎಂದು ನಮ್ಮ ಶಿಸ್ತು ಸಂಹಿತೆಯಲ್ಲಿ ಹೇಳಿದೆ. ಆದರೂ ಇಲ್ಲಿಯ ಸನ್ನಿವೇಶ ಅಷ್ಟೊಂದು ಮೋಹಕವಾಗಿತ್ತು. ೪೦ ಅಡಿ ಉದ್ದ ಸುಮಾರು ೩೦ ಅಡಿ ಅಗಲದ ಆ ಕೊಳದಲ್ಲಿ ನೀರಿನ ಆಳ ಎಲ್ಲಿಯೂ ೮ ಅಡಿಗಿಂತ ಜಾಸ್ತಿ ಇರಲಿಲ್ಲ. ಆದರೆ ತಳದಲ್ಲಿ ಕೊಳೆತ ಎಲೆಗಳ ಕಸಕಡ್ಡಿಗಳ ಬಲವಾದ ಸುಸ್ತರವೇ ನೆಲಸಿತ್ತು. ನಮ್ಮ ಹುಡುಗರು ಈಸಲು ತೊಡಗಿದೊಡನೆಯೇ ಶತಶತಮಾನಗಳ ಇತಿಹಾಸದ ಮಡ್ಡಿಯನ್ನು ಕಲಕಿದಂತಾಯಿದು: "ಶತಮಾನಂಗಳ ಸಂಗ್ರಹ ಸಂಸ್ಕೃತಿ!"



ಮುಂದೆ ಹಗ್ಗದಲ್ಲಿ ಜಾರಿದ ಹುಡುಗರು ಅಂಡರ್ವೇರ್ನಲ್ಲಿದ್ದರು. ಅವರೆಲ್ಲರೂ ಸೇತುವೆ ಮಧ್ಯದ ನೀರಿನ ಸೇಚನೆಯನ್ನು ಹೊಸ ಆಟವೆಂದು ಆಡಿದರು. ನಾವೆಲ್ಲರೂ ಮನದಣಿಯೆ ಈ ಆಟ ಆಡಿದೆವು. ಥಿಯೊರೆಟಿಶಿಯನ್ ಪಿಂಟೊ "ಯಾಕ್ರಪ್ಪಾ, ದೇಹ ಬಿಸಿಯಾಗಿರುವಾಗ ಇದು ಸರಿಯಲ್ಲ" ಎಂದು ಮುಂತಾಗಿ ಹೇಳುತ್ತಿದ್ದ. ನಾನು ಅವನನ್ನು ಬಲವಾಗಿಯೇ ಕೆಣಕಿದೆ, "ಪಿಂಟೋ! ನೀನು ಆ ಆಟವಾಡಿದರೆ ನಾನೂ ಆಡುತ್ತೇನೆ. ನಿನಗೆ ಧೈರ್ಯವಿಲ್ಲ!" ಎದ್ದರೆ ಆಳಲ್ಲ ಪಿಂಟೋ. ಜಾಂಬವಂತನ ಕೆಲಸ ನಾನು ಮಾಡಿದೊಡನೆ (ನನ್ನ ರೂಪ ಹಾಗಿಲ್ಲ!) ಪಿಂಟೋ ಹನುಮಂತನಾದ. ಸಾಗರೋಲ್ಲಂಘನ ಮಾಡಿಯೇ ಬಿಟ್ಟ. ನಾನೂ ಅವನ ಹಿಂದೆ ಧಾವಿಸಿದೆ. ಆದರೆ ಏನು ಮಾಡಿದರೂ ಎಷ್ಟು ಕೆಣಕಿದರೂ ಈಸದಿದ್ದವರು ಇಬ್ಬರು – ವಾಸು, ಕಾರಣ ಈಸುಬಾರದು; ಆದರೆ ಅವನು ಹಗ್ಗದಲ್ಲಿ ಜಾರಿ ನೀರಿನಲ್ಲಿ ಮುಳುಗಿ ಮಿಂದು ಮೇಲೆದ್ದ. ಇನ್ನೊಬ್ಬ ಜಯರಾಮ, ಕಾರಣ ಶೀತ ಎಂದು ಮುಂತಾಗಿ ಆಗ ಬುರುಡೆ ಹೊಡೆದ. ಹಿಂದಿನಿಂದ ತಿಳಿಯಿತು: ಆತ ಅಂಡರ್‌ವೇರೇ ಧರಿಸಿರಲಿಲ್ಲವಂತೆ!

ಮುಂದೆ ರ್‍ಯಾಪ್ಲಿಂಗ್ ನಡೆಯಬೇಕಲ್ಲ. ಶಿಲಾರೋಹಣ ಹೇಗೂ ಆಗಿದೆ. ರ್‍ಯಾಪ್ಲಿಂಗ್ ಮಾಡಲು ಅನುಕೂಲವಾದ ಒಂದು ಕಡಿದಾದ ಬಂಡೆ ಸಮೀಪದಲ್ಲಿಯೇ ದೊರೆಯಿತು. ಕೊಳದಿಂದ ಹೊರಟ ವಾನರಸೇನೆ ಅದರ ಬುಡದಲ್ಲಿ ಬೀಡುಬಿಟ್ಟಿತು. ಅದರ ಎತ್ತರ ೩೦ ಅಡಿ. ಅಲ್ಲಿ ಮನಸ್ವೀಯಾಗಿ ನಾನಾ ವಿಧದ ರ್‍ಯಾಪ್ಲಿಂಗ್ ಆಟ ಆಡಿ ಹಿಂದಕ್ಕೆ ಹೊರಡುವಾಗ ೫ ಗಂಟೆ ದಾಟಿ ಹೋಗಿತ್ತು. ಹಸಿವು ಬಾಯಾರಿಕೆ ತೀವ್ರವಾದುವು. ದೂರ ನಡೆದಷ್ಟೂ ಮುಗಿಯುವುದಿಲ್ಲ ಎಂದು ಭಾಸವಾಯಿತು. ಭಾರವಾದ ದೇಹಗಳನ್ನು, ಸೆಟೆದು ನಿಂತ ಕಾಲುಗಳಿಂದ ಎಳೆದುಕೊಂಡು ಹೋಗಿ ಬಂಗ್ಲೆ ತಲಪುವಾಗ ೮ ಗಂಟೆ ರಾತ್ರಿ ಮೀರಿತ್ತು. ದೊರೆಗಳು ಉದ್ವಿಗ್ನರಾಗಿದ್ದರು. ನಾವು ಸುರಕ್ಷಿತವಾಗಿ ಹೆಮ್ಮೆಯಿಂದ ಮರಳಿ ಬಂದುದು ಅವರಿಗೆ ಸಂತೋಷವೀಯಿತಾದರೂ ಅವರ ಭಾವನೆಯನ್ನು ನಮಗೆ ತಿಳಿಸಿಯೇ ಬಿಟ್ಟರು.

"ನೀವು ಸಂತೋಷಪಡಿ, ಸಾಹಸಪ್ರದರ್ಶನ ಮಾಡಿ. ಅದಕ್ಕಾಗಿಯೇ ನಾವಿಲ್ಲಿಗೆ ಬಂದದ್ದು. ಆದರೆ ಕತ್ತಲೆಗೆ ಮೊದಲು ಹಿಂದೆ ಬರಲೇಬೇಕು. ಇಲ್ಲವಾದರೆ ಇಲ್ಲಿ ನಾನು ಏನೆಂದು ತಿಳಿಯಬೇಕು? ಪ್ರತಿಯೊಂದು ಮಗುವಿನ ಜೀವನವೂ ನನ್ನ ಪವಿತ್ರ ಹೊಣೆಯಲ್ಲವೇ?"

# ನಿಮ್ಮ ಊಟ ಇಲ್ಲಿದೆ

**ಅಧ್ಯಾಯ ಹದಿನೆಂಟು**



ನಾವೆಲ್ಲರೂ ಬಿಸಿ ಬಿಸಿ ಟೀ ಕುಡಿಯುತ್ತಿದ್ದಂತೆಯೇ ದೊರೆಗಳೆಂದರು, "ನೀರಿನ ಸಮಸ್ಯೆಯನ್ನು ಪರಿಹರಿಸಿಬಿಟ್ಟೆ." ನನಗೆ ಆಶ್ಚರ್ಯವೂ ಸಂತೋಷವೂ ಆದುವು. ಅವರೇ ಮುಂದುವರಿಸಿದರು, "ನೀವೆಲ್ಲರೂ ಹೋದ ಬಳಿಕ ಉಳಿದವರು ಟೆಂಟ್ ಕೆಲಸ, ಶುಚಿತ್ವ ಕಾರ್ಯ, ನೀರು ತರುವುದು ಮುಂತಾದವನ್ನು ಮಾಡುತ್ತಿದ್ದರು. ನಿಸಾರರೂ ಸ್ವಾಮಿಯವರೂ ಆ ಹೊಣೆವಹಿಸಿಕೊಂಡರು. ನನಗೆ ಮತ್ತೇನು ಕೆಲಸ? ಹುಡುಗರು ನೀರನ್ನು ಸಂಗ್ರಹಿಸಿಡಲು ಪಾತ್ರೆಗಳೇ ಇಲ್ಲವಲ್ಲ. ಬೆಳ್ತಂಗಡಿಗೆ ಹೋಗಿ ಎರವಲಾಗಿ ತರೋಣ, ಲಿಂಗೋಜಿಯನ್ನು ವಿಚಾರಿಸಿದಂತೆಯೂ ಆಯಿತು, ಬೆಂಗಳೂರಿಗೆ ಟ್ರಂಕ್ ಫೋನ್ ಮಾತಾಡಿದಂತೆಯೂ ಆಯಿತು ಎಂದು ಹೊರಟುಬಿಟ್ಟೆ.

"ಬೆಂಗಳೂರಿನಲ್ಲಿ ತಂದೆಯವರ ಪರಿಸ್ಥಿತಿ ಹಾಗೆಯೇ ಇದೆ ಎಂದು ತಿಳಿದು ಇದ್ದುದರಲ್ಲಿ ಸಮಾಧಾನ ಆಯಿತು. ಲಾರಿಗೆ ಹೊಸ ಬಿಡಿ ಭಾಗ ತರಲೇಬೇಕು. ಅದಕ್ಕಾಗಿ ಮಂಗಳೂರಿಗೆ ಯಾರನ್ನಾದರೂ ಕಳಿಸಬೇಕು. ನಾಳೆಯ ದಿನ ಹರೂನನ್ನು ಕಳಿಸುವುದು ಎಂದು ನಿಶ್ಚೈಸಿದ್ದೇನೆ. "ಇವೆರಡು ಕೆಲಸ ಮುಗಿದನಂತರ ದೊಡ್ಡ ಹಂಡೆ ಅಥವಾ ಗುಡಾಣಗಳು ಎಲ್ಲಿ ಎರವಲಾಗಿ ದೊರೆಯಬಹುದು ಎಂದು ತಿಳಿಯಲು ಬೆಳ್ತಂಗಡಿ ಇಡೀ ಅಲೆದಾಡಿದೆ. ಒಂದು ಮಸೀದಿಯಲ್ಲಿ ಅವು ದೊರೆಯುತ್ತವೆಂದು ತಿಳಿಯಿತು. ಅಲ್ಲಿಗೆ ಹೋದೆ. ಅಧಿಕಾರಿಗಳನ್ನು ಕಂಡೆ. ನಮ್ಮ ಕತೆಯನ್ನು ಹೇಳಿದೆ. ಬಗೆ ಬಗೆಯಲ್ಲಿ ಕೇಳಿಕೊಂಡೆ. ಆದರೆ 'ಎಂಟು ಹತ್ತು ದಿವಸಗಳವರೆಗೆ ನಿಮಗೆ ಕೊಡಲು ಸಾಧ್ಯವೇ ಇಲ್ಲ' ಎಂಬುದೊಂದೇ ಅವರ ಉತ್ತರ. 'ಅಷ್ಟು ದೂರದಿಂದ, ಬೆಂಗಳೂರಿನಿಂದ ನಿಮ್ಮೂರಿಗೆ ಮಕ್ಕಳು ಬಂದಿದ್ದಾರಪ್ಪಾ. ಇಷ್ಟು ಉಪಕಾರ ನೀವು ಮಾಡಬಾರದೇ?' ಅವರ ಮನಃಪರಿವರ್ತನೆಯಾಗಲೇ ಇಲ್ಲ. ಅಲ್ಲಿಂದ ಬೇಸರಗೊಂಡು ಹೊರಟೆ. ಇನ್ನೊಂದು ಕಡೆ ವಿಚಾರಿಸುವಾಗ, ಅಲ್ಲಿಯೇ ಸಮೀಪದಲ್ಲಿ ಅಂದರೆ ಜಮಾಲಾಬಾದಿನ ಬುಡದಲ್ಲಿ ಒಬ್ಬ ಶ್ರೀಮಂತರ ಮನೆಯಿದೆ. ಅವರಲ್ಲಿ ದೊರೆತರೂ ದೊರೆಯಬಹುದು ಎಂದು ತಿಳಿಯಿತು. ನನಗೆ ಧೈರ್ಯವಿರಲಿಲ್ಲ. ಆದರೂ ಪ್ರಯತ್ನ ಮಾಡಿಯೇ ಬಿಡೋಣವೆಂದು ಹೊರಟೆ. ಆ ಹಳ್ಳಿ ಧೂಳಿನ ದಾರಿ. ಸೆಕೆಯೋ ಸೆಕೆ. ಹುಡುಗರಿಬ್ಬರೂ ಲಾರಿಯಲ್ಲಿದ್ದಾರೆ. ಮನೆಯಿಂದ ದೂರದಲ್ಲಿ ಲಾರಿ ನಿಲ್ಲಿಸಿ ಅವರಲ್ಲಿಗೆ ನಡೆದುಕೊಂಡು ಹೋದೆ. ವಿಶಾಲವಾದ ದೊಡ್ಡ ಅರಮನೆ. ಯಜಮಾನರ ಹೆಸರು ನಡುಗುತ್ತು ಚಂದ್ರಯ್ಯ ಆಜ್ರಿ ಎಂದು ಮತ್ತೆ ತಿಳಿಯಿತು. ಅಲ್ಲಿ ಹಳ್ಳಿಯ ಹಳೆ ಕಾಲದ ಸಮೃದ್ಧ ವಾತಾವರಣ. ನನ್ನ ವೇಷ, ಭೂಷಣ, ನಾನು ಹೋದ ಮಧ್ಯಾಹ್ನದ ಬಿಸಿಲಿನ ಹೊತ್ತು ಯಾವುದೂ ಅಲ್ಲಿಗೆ ಒಪ್ಪುವಂತಿರಲಿಲ್ಲ. ಹೋದೆ. ಮೆಟ್ಟಲಿನಲ್ಲಿ ನಿಲ್ಲುವಾಗಲೇ ಒಳಗಿನಿಂದ ಬಂದ ಯುವಕರೊಬ್ಬರು 'ನಮಸ್ಕಾರ, ಬನ್ನಿ ಕುಳಿತುಕೊಳ್ಳಿ' ಎಂದು ಹಳೆಯ ಪರಿಚಯವಿದ್ದವರಂತೆ ಸ್ವಾಗತಿಸಿದರು. 'ನನಗೆ ವೇಳೆ ಇಲ್ಲ. ನಾನು ಬಂದದ್ದು...' ಎಂದು ಹೇಳುತ್ತಿದ್ದಂತೆಯೇ 'ಅದೆಲ್ಲವನ್ನೂ ಆಮೇಲೆ ವಿಚಾರಿಸೋಣ. ನೀವು ಮೇಲೆ ಬನ್ನಿ. ಕುಳಿತುಕೊಳ್ಳಿ' ಎಂದು ಒತ್ತಾಯ ಮಾಡಿದರು. ಇದೇನಪ್ಪಾ ಕಾಲ ಮೀರುತ್ತಿದೆ. ಇಲ್ಲಿಯೂ



ನಕಾರವಾದರೆ ಎಂದುಕೊಂಡೆ. ಮುಂದಿನ ಗಳಿಗೆಯಲ್ಲಿ ಒಳಗಿನಿಂದ ಇನ್ನೊಬ್ಬರು ತಂಬಿಗೆ, ನೀರು ಟವೆಲ್ ತಂದರು. ಹಿಂದೆಯೇ ಷರಬತ್ತು ತಂದರು. 'ನೀವು ಲಾರಿಯಲ್ಲಿ ಬಂದದ್ದು ಕಂಡೆ. ಅದರಲ್ಲಿರುವ ಎಲ್ಲರನ್ನೂ ಬರಹೇಳಿ' ಎಂದು ಅಲ್ಲಿಗೆ ಜನ ಕಳಿಸಿದರು. ನನಗೆ ಬಹಳ ಸಂಕೋಚವಾಯಿತು. ಷರಬತ್ತು ಕುಡಿಯುತ್ತ – ಆ ಸೆಕೆ ಆ ಬಳಲಿಕೆಗೆ ಅದು ಅದ್ಭುತವಾಗಿತ್ತು. ನಾನು ಅಲ್ಲಿಗೆ ಬಂದಿದ್ದುದರ ಕಾರಣ ಹೇಳಿದೆ. ನನಗೆ ಎರಡು ಹಂಡೆ ಬೇಕೆಂದೂ ಕೇಳಿಕೊಂಡೆ. ಅವರು ಅದಕ್ಕೆ ಉತ್ತರ ಕೊಡಲಿಲ್ಲ. ನಮ್ಮ ಬಳಗದವರಿಗೂ ಉಪಚಾರ ನಡೆಯಿತು. ನನಗೆ ಹೊತ್ತಾಗುವುದೆಂದು ಆತುರ. ಇವರು ಪಾತ್ರೆಯ ವಿಚಾರ ಮಾತಾಡುವುದೇ ಇಲ್ಲವಲ್ಲ ಎಂದು ಕಾತರ. 'ಸ್ವಾಮೀ ಪಾತ್ರೆ ತಮ್ಮಲ್ಲಿ ದೊರೆಯಬಹುದೇ?' ಎಂದು ಪುನಃ ಪ್ರಶ್ನಿಸಿದರೆ 'ಅದು ಆಮೇಲೆ

ನೋಡೋಣ. ಈಗ ನೀವು ಊಟ ಮಾಡಬೇಕಲ್ಲ' ಎಂದರು. 'ಇಲ್ಲ ಕ್ಷಮಿಸಬೇಕು. ನಮಗೆ ಊಟ ಕ್ಯಾಂಪಿನಲ್ಲಿ ತಯಾರಾಗಿದೆ. ಅಲ್ಲಿ ಕಾಯುತ್ತಿದ್ದಾರೆ. ನಾವು ಹೋಗಬೇಕು. ಪಾತ್ರೆ ದಯವಿಟ್ಟು...' 'ಅದು ಹೇಗೆ? ನಿಮ್ಮ ಊಟ ಇಲ್ಲಿ ಎಂದು ಮೊದಲೇ ಗೊತ್ತಾಗಿದೆಯಲ್ಲ! ಈಗ ಇಲ್ಲಿಯೇ ಊಟ ಮಾಡಬೇಕು' ಎಂದರು.

"ನಮ್ಮ ದುಸ್ತು ನೋಡಿ ಬೆಂಚು ಕುರ್ಚಿ ತಯಾರು ಮಾಡಿದರು. ಎಲೆ ಹಾಕಿದರು. ಅಣ್ಣ ತಮ್ಮಂದಿರು ಸೇರಿ ಬಡಿಸಲು ತೊಡಗಿಯೇ ಬಿಟ್ಟರು. ಪಂಚಭಕ್ಷ್ಯ ಪರಮಾನ್ನ ಭೋಜನವೆಂದರೆ ಅದು. ಅವರ ಹಿರಿಯ ಸಂಬಂಧಿಕರೊಬ್ಬರಿಗೆ ಆ ಮಧ್ಯಾಹ್ನ ಔತಣ ಏರ್ಪಡಿಸಿ ಮನೆಯವರೆಲ್ಲರೂ ಊಟಕ್ಕೆ ಕುಳಿತಿದ್ದರಂತೆ. ನಾವು ಊಟ ಮಾಡುತ್ತಿದ್ದಂತೆಯೇ ಅವರೆಲ್ಲರೂ ಬಂದರು. ಅವರ ಪ್ರೀತಿ ವಿಶ್ವಾಸ, ಉಪಚಾರಗಳಿಗೆ ಮಿತಿಯೇ ಇಲ್ಲ. ಊಟವಾದ ಮೇಲೆ ನನ್ನನ್ನು ಅವರ ಮನೆಯ ಉಗ್ರಾಣಕ್ಕೆ ಕರೆದುಕೊಂದು ಹೋಗಿ 'ನಿಮಗೆ ಬೇಕಾದ ಪಾತ್ರ ಆರಿಸಿಕೊಳ್ಳಿ. ಬೇಕಾದಷ್ಟು ದಿವಸ ಇಟ್ಟುಕೊಂಡು ಆಮೇಲೆ ತಂದುಕೊಡಿ' ಎಂದರು. ಹೀಗೆ ನಮಗೆ ಈ ಹಂಡೆಗಳು ದೊರೆತುವು.

"ನಾನು ಪಾತ್ರೆ ತೆಗೆದುಕೊಂಡು ಮರಳುತ್ತಿದ್ದಂತೆಯೇ ಯೋಚನೆ ಮಾಡಲು ತೊಡಗಿದೆ – ಒಂದು ಕಾಲದಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳು ಬಂದಿಳಿದುಕೊಳ್ಳುತ್ತಿದ್ದ ಈ ಬಂಗ್ಲೆಯಲ್ಲಿ ಅವರು ನೀರಿಗೇನಾದರೂ ಏರ್ಪಾಡು ಮಾಡಿರಲಾರರೇ? ಬೆಟ್ಟದ ಬುಡ, ತೋಡಿದಲ್ಲಿ ನೀರು ದೊರೆಯಬೇಕು – ಬಾವಿ ಅಗೆಸಿರಲೇಬೇಕು ಎಂದು ನನ್ನ ತರ್ಕ. ಡಾಕ್ಟರರೊಡನೆ ಈ ವಿಚಾರ ಮಾತಾಡಿದೆ. ಅವರು ಇಡೀ ಕಾಂಪೌಂಡನ್ನು ಸುತ್ತಿ ನೋಡಿದರು. ನನ್ನ ಊಹೆ ಸರಿಯಾಗಿತ್ತು. ಈ ಔಟ್ ಹೌಸಿನ ಹಿಂದೆ ೧೦೦ ಗಜ ದೂರದಲ್ಲಿದ್ದ ಹಾಳುಬಾವಿಯನ್ನು ಅವರು ಹುಡುಕಿದರು. ಬಗ್ಗಿ ನೋಡಿದೆವು, ಕಲ್ಲು ಕಟ್ಟಿದ್ದಾರೆ, ಅಡಿಯಲ್ಲಿ ನೀರು ಹೊಳೆಯುತ್ತಿದೆ. ಕಂಬ ಕಟ್ಟಿಸಿ, ಹಗ್ಗ ರಾಟೆ ಹಾಕಿ, ನೀರು ಸೇದಿದೆವು. ಸಮೃದ್ಧಿಯಾಗಿದೆ, ಶುದ್ಧವಾಗಿದೆ. ಡಾಕ್ಟರರೂ ಸರ್ಟಿಫಿಕೇಟ್ ಕೊಟ್ಟರು. ನೀರನ್ನು ಶುದ್ಧಪಡಿಸಲು ಬಾವಿಗೇ ಬ್ಲೀಚಿಂಗ್ ಪೌಡರ್ ದ್ರವವನ್ನು ಸುರಿದರು. ಈಗ ಕುಡಿಯಲು, ಸ್ನಾನ ಮಾಡಲು ಬೇಕಾದಷ್ಟು ನೀರು ಸಮೀಪದಲ್ಲಿಯೇ ಇದೆ."

# ಒಂಟಿ – ವಾಂತಿಗುಡ್ಡೆಯ ಮೇಲೆ

### ಅಧ್ಯಾಯ ಹತ್ತೊಂಬತ್ತು

ಶಿವಪ್ಪನವರ ತಂಡ ಮೆಂಗಿಲ ಶೇಣವನೊಡಗೂಡಿ ಕುದುರೆಮುಖದ ಸರಹದ್ದಿಗೆ ಹೋಗಿ ಮರಳಿತ್ತು. ಅವರು ಹೋದ ಬೆಟ್ಟದ ಹೆಸರು ಒಂಟಿಗುಡ್ಡೆ. ಇದನ್ನು ಓಂತಿಗುಡ್ಡೆ ವಾಂತಿಗುಡ್ಡೆಯೆಂದೂ ಕರೆಯುತ್ತಾರೆ. ಇದು ಆ ಭಾಗದಲ್ಲಿ ಒಂಟಿಯಾಗಿ ನಿಂತಿರುವುದರಿಂದ ಒಂಟಿಗುಡ್ಡೆ. ಓತಿಕೇತ ಓಡಲು ನಿಂತಿರುವ ಭಂಗಿಯಲ್ಲಿರುವುದರಿಂದ ಓಂತಿ ಗುಡ್ಡೆ. ಇನ್ನು ಕನ್ನಡದ ಒಂಟಿ, ವೊಂಟಿಯಾಗಿ ಇಂಗ್ಲಿಶಿನಲ್ಲಿ vonti ಆಗಿ ಕನ್ನಡಕ್ಕೆ ಮರಳುವಾಗ ವಾಂತಿ ಆದುದಾಗಿರಲೂಬಹುದು. "ಭೂದೇವಿಯ ವಾಂತಿ ಈ ಸಾಲಲ್ಲವೇ?" ಎಂದನೊಬ್ಬ ಜೀಯಾಲಜಿ ಪಂಡಿತ.

ಮುಂದಿನ ಎರಡು ದಿವಸ (೧೩, ೧೪) ತಂಡಗಳನ್ನು ಬದಲಾವಣೆಗೊಳಿಸುವುದರ ಮೂಲಕ ಎಲ್ಲರಿಗೂ ಎಲ್ಲ ಶಿಕ್ಷಣಗಳೂ ಲಭಿಸಿದುವು. ನಿಸಾರ್, ಸ್ವಾಮಿ, ಶಿವಪ್ಪ ಒಂದೊಂದು ದಿವಸ ಒಂದೊಂದು ತಂಡದೊಡನೆ ಹೋಗಿ ಮರಳಿದರು. ಒಂಟಿಗುಡ್ಡೆಯಿಂದ ಕುದುರೆಮುಖ, ಅದರೆದುರಿನ ಜಮಾಲಾಬಾದ್ ಎರಡನ್ನೂ ನೋಡಿದ ಕೆಂಡಗಣ್ಣಸ್ವಾಮಿ ದೂರದ ಊರಿನಲ್ಲಿರುವ ತನ್ನ ಪ್ರೇಯಸಿಯ ಸುಂದರ ವದನವನ್ನು ಸ್ಮರಿಸುತ್ತ ಹೀಗೆಂದು ಬರೆದರು:

ಜಮಾಲಾಬಾದೇ ನಂಗೊಂದ್ ಶಾಲೆ<br>ಆನೆ ತರ ಕಣೆ ಅದರ್ ತಲೆ!<br>ಕುದ್ರೇಮುಖದ್ಮೇಲ್ನಿಂತು ನೋಡಿದ್ರೆ – ಬಾಲೆ!<br>ಜಮಾಲಾಬಾದ್ – ಮಡ್ವೆ ನಿಮ್ಮುಖದ್ಮೇಲೆ!

ಮುಕುಂದನ ಖಾಯಿಲೆ ಜಾಸ್ತಿಯಾಯಿತು. ಯಾವ ಆಹಾರವೂ ದಕ್ಕಲಿಲ್ಲ. ವಾಂತಿ, ವಾಂತಿ, ಹೊಟ್ಟೆನೋವು. ಅವನನ್ನು ಮಂಗಳೂರಿನ ದೊಡ್ಡ ಆಸ್ಪತ್ರೆಗೆ ಕಳಿಸುವುದು ಅಗತ್ಯವೆಂದು ಡಾಕ್ಟರರೆಂದರು. ಆದರೆ ಹುಡುಗ ಹೋಗಲೊಪ್ಪಲಿಲ್ಲ. ಹೇಗಾದರೂ ಮುಂದಿನ ಒಂದೆರಡು ದಿವಸಗಳಲ್ಲಿ ಹುಷಾರಾಗುವುದಾಗಿ ಆಸೆಯಿಟ್ಟುಕೊಂಡಿದ್ದ. ನಮ್ಮ ಬಳಗದ ಅತ್ಯುತ್ಸಾಹೀ ಹುಡುಗ ಇವನು. ಮೂರ್ತಿ ಕಿರಿದಾದರೂ ಹಿರಿ ಸಾಮರ್ಥ್ಯವಂತ. ಡಾಕ್ಟರರ ಊಹೆ ಅವನಿಗೆ ಅಪ್ಪೆಂಡಿಸೈಟಿಸ್ ಇರಬಹುದೆಂದು. ಅವನನ್ನು ಸೋಮವಾರ ಹರೂನನೊಂದಿಗೆ ಮಂಗಳೂರಿಗೆ ಕಳಿಸಿದೆವು. ಅಲ್ಲಿ ಅದು ಅಪ್ಪೆಂಡಿಸೈಟಿಸ್ ಹೌದೆಂದು ದೃಢವಾಯಿತು. ಶಸ್ತ್ರಚಿಕಿತ್ಸೆ ಒಡನೆ ನಡೆಸಬೇಕೆಂದು ಅವನ ವಾರೀಸುದಾದರರಿಗೆ (ಬೆಂಗಳೂರಿಗೆ) ತಿಳಿಸಲಾಯಿತು. ಅವರು ಕೂಡಲೇ ಕಾರಿನಲ್ಲಿ ಮಂಗಳೂರಿಗೆ ಧಾವಿಸಿ ಬಂದು

ಮುಕುಂದನನ್ನು ಬೆಂಗಳೂರಿಗೆ ಕರೆದುಕೊಂಡು ಹೋದರು. ಆಶ್ಚರ್ಯವೆಂದರೆ ಆಗ ಅವನ ಖಾಯಿಲೆ ಕಡಿಮೆಯಾಗಿತ್ತು. ಮುಂದೆ ಶಸ್ತ್ರ ಚಿತ್ಸೆಯಿಲ್ಲದೇ ಅವನು ಹುಷಾರಾಗಿಯೂ ಬಿಟ್ಟ, ಪಾಪ, ಶಿಬಿರ ಮಾತ್ರ ತಪ್ಪಿಹೋಯಿತು. ಬೆಂಗಳೂರಿನಿಂದ ವಿಶೇಷ ಸುದ್ದಿ – ದೊರೆಗಳಿಗೆ, ನಿಸಾರರಿಗೆ – ಬರದಿದ್ದುದರಿಂದ ನಮ್ಮ ಕ್ಯಾಂಪು ಬಲು ಬಿರುಸಿನಿಂದ ಸಂತೋಷದಿಂದ ಮುಂದುವರಿಯಿತು.

# ಕಾಸ್ಮಿಕ್‌ರೇ ತಯಾರಿಸಿದ ಹಲ್ವಾ

**ಅಧ್ಯಾಯ ಇಪ್ಪತ್ತು**

ನಮ್ಮ ಸಂಶೋಧನಾಪಂಡಿತ ಕಾಸ್ಮಿಕ್‌ರೇ ಆ ಒಂದು ದಿವಸ ಕೇಳಿದ, “ಸಕ್ಕರೆ ಕುಂಬಳಕಾಯಿ ಹಲ್ವ ಮತ್ತು ಬಂಡೆ ಚಪಾತಿ ತಿಂದಿದ್ದೀರಾ ಸಾರ್?”
“ಕಾಶೀ ಹಲ್ವ ತಿಂದಿದ್ದೇನೆ. ಅದೂ ಬೂದಿಗುಂಬಳಕಾಯಿಯಿಂದ ಮಾಡುವುದು. ಇನ್ನು ಬಂಡೆ ಚಪಾತಿ ತಿನ್ನುವುದೇ?”
“ಕಾದ ಬಂಡೆಯ ಮೇಲೆ ಚಪಾತಿ ಬೇಯಿಸಿ ತಿನ್ನಬಹುದು. ಅದನ್ನು ಕುದುರೆಮುಖದ ಮೇಲೆ ಹೋದಾಗ ಮಾಡಿ ತೋರಿಸುತ್ತೇನೆ. ನೀವು ನನಗೆ ಒಂದೆರಡು ಸಕ್ಕರೆ ಕುಂಬಳಕಾಯಿ ತರಿಸಿಕೊಟ್ಟರಾಗಬಹುದು.”
ಬೆಳ್ತಂಗಡಿಗೆ ಹೋದ ಅನ್ಸಾರಿಗೆ ಸಕ್ಕರೆ ಕುಂಬಳಕಾಯಿ ಎಲ್ಲಿಯೂ ದೊರೆಯಲಿಲ್ಲ. ಪುನಃ ಹೋದಾಗ ಚೀನೀಕಾಯಿ ತೆಗೆದುಕೊಂಡು ಬಾ ಎಂದೆ. ಒಂದಲ್ಲ ನಾಲ್ಕು ತಂದ. ಒಂದೇ ವಸ್ತು, ಬೆಂಗಳೂರು ಭಾಷೆ ಈ ಊರ ಜನರಿಗೆ ತಿಳಿಯಲಿಲ್ಲ.

ಕಾಸ್ಮಿಕ್, ಶ್ರೀನಿವಾಸ, ವಾಸು ಹಲ್ವದ ಪಾಕಶಾಸ್ತ್ರಿಗಳು. ಅವರು ಬಲು ಶ್ರದ್ಧೆಯಿಂದ ಅದರ ತೊಟ್ಟು ಕತ್ತರಿಸಿ, ಅಲ್ಲಿ ತೂತ ಕೊರೆದು, ಒಳಗಿನ ಬೀಜ, ಸುಂಗು ಎಲ್ಲವನ್ನೂ ಹೊರ ತೆಗೆದರು. ಈಗ ಚೀನೀಕಾಯಿ ಬರೀ ಗುಳವಿರುವ ಬುರುಡೆಯಾಯಿತು. ಅದರೊಳಗೆ ಬೆಲ್ಲ, ತೆಂಗಿನಕಾಯಿ, ಕಸಕಸೆ, ಏಲಕ್ಕಿ ಪಾಕವನ್ನು ಓರಣವಾಗಿ ತುಂಬಿಸಿ ತೊಟ್ಟಿನ ಮುಚ್ಚಳ ಮುಚ್ಚಿದರು. ಶಿಬಿರಾಗ್ನಿಯ ಸ್ಥಳದಲ್ಲಿ ಎರಡಡಿ ಆಳದ ಹೊಂಡ ತೋಡಿ ವಿಧಿಪೂರ್ವಕವಾಗಿ ಹೂರಣಪೂರ್ಣ ಚೀನೀಕಾಯಿಯನ್ನು ಅದರೊಳಗೆ ಸ್ಥಾಪಿಸಿ ಮಂತ್ರ ಪೂರ್ವಕವಾಗಿ ಮಣ್ಣುಮುಚ್ಚಿ ಅಭಿಷೇಕ ಮಾಡಿ ಅದರ ಮೇಲೆ ಶಿಬಿರಾಗ್ನಿ ಹೊತ್ತಿಸಿದರು. ಅಗ್ನಿಯ ಸುತ್ತಲೂ ಕೋಲಾಟ, ಬಯಲಾಟ, ಹಾಡುಗಬ್ಬ, ಕತೆಗಳ ಹೊನಲು ಹರಿಯಿತು. ಬೆಂಕಿ ಎಷ್ಟು ಹೊತ್ತು ಉರಿಯಬೇಕೆಂದು ಯಾರಿಗೂ ಖಚಿತವಾಗಿ ತಿಳಿದಿರಲಿಲ್ಲ. ಈಗಾಗಲೇ ಮೇಲಿನ ಶಾಖದಿಂದ ಚೀನೀಕಾಯಿ ಕಪ್ಪಾಗಿ ಹೋಗಿರಬಹುದೆಂದು ಎಲ್ಲರಿಗೂ ತವಕ ಉಂಟಾಯಿತು.
“ಹಸಿವಾಗುತ್ತಿದೆ, ಹಲ್ವ ಬೇಕು” ಎಂದೊರಲಿದ ಸೋಮಯ್ಯ.
ಬೆಂಕಿ ಎಳೆದರು, ಕೆದಕಿದರು. ರಾಶಿ ರಾಶಿ ನೀರು ಸುರಿದರು. ಅಲ್ಲೆಲ್ಲ ಬೂದಿ ಹೊಗೆ, ಅಂಗಳವೆಲ್ಲ ಹೇಸಿಗೆ. ನೆಲ ತಣ್ಣಗೆ ಮೆತ್ತಗಾದ ಮೇಲೆ ಕೆಸರಿನ ಹೊಂಡದಿಂದ ಚೀನೀ ಕಾಯಿಯನ್ನು ನಿಧಿ ಉತ್ಖನಿಸುವ ಗಾಂಭೀರ್ಯದಿಂದ ಎತ್ತಿದರು. ಅದು ಕಪ್ಪಾಗಿ ಹೋಗಿರಲಿಲ್ಲ.
“ಅಬ್ಬಾ! ಇದು ಫಸ್ಟ್ ಕ್ಲಾಸಾಗಿ ಬೆಂದಿದೆ” ಎಂದು ಉದ್ಗರಿಸಿದ ಕಾಸ್ಮಿಕ್, ಶೀನಿ, ವಾಸು ಮತ್ತು ಅವನ ಬೆಂಬಲಿಗರು.

ತೊಟ್ಟಿನ ಮುಚ್ಚಳ ಕಳಚಿದ. ಒಳಗಡೆ ಬೆಟ್ಟನಿಟ್ಟ. ಹೂರಣ ಅಂಟಿ ಚುರುಚುರು ಎಂದಾಗ ಬೆಟ್ಟು ಸ್ವಾಭಾವಿಕವಾಗಿಯೇ ಬಾಯಿಗೆ ಧಾವಿಸಿತು. ಹಂದಿಯ ಮಾಂಸವನ್ನು ತಿನ್ನಲು ಆದಿಮಾನವ ಕಂಡು ಹಿಡಿದದ್ದು ಈ ಕ್ರಮದಲ್ಲಿಯೇ ಅಂತೆ. ಗುಡಿಸಲಿಗೆ ಅಕಸ್ಮಾತ್ತಾಗಿ ಬೆಂಕಿ ಬಿದ್ದಾಗ, ಒಳಗೆ ಕಟ್ಟಿ ಹಾಕಿದ್ದ ಹಂದಿಗಳು ಜೀವಂತ ಬೆಂದು ಹೋದುವು. ಆದಿಮಾನವ ಅವನ್ನು ಮುಟ್ಟಿದ, ಮಾಂಸ ಅಂಟಿ ಬೆಟ್ಟು ಸುಟ್ಟಿತು, ಬಾಯಿಗೆ ಧಾವಿಸಿತು. ಮುಂದೆಷ್ಟೋ ವರ್ಷ ಗುಡಿಸಲೊಳಗೆ ಹಂದಿಯನ್ನು ಕಟ್ಟಿಹಾಕಿ ಹೊರಾಗಿನಿಂದ ಬೆಂಕಿಯಿಕ್ಕಿ ಆ ಸುಟ್ಟ ಹಂದಿಯನ್ನು ತಿನ್ನುವ ಪಾಶವೀಕ್ರಮ (ಸುಡುವ ಕ್ರಮ ಮಾತ್ರ ಪಾಶವೀ, ಕೊಂದು ತಿನ್ನುವುದು ಖಂಡಿತವಾಗಿಯೂ ಅಲ್ಲ) ರೂಢಿಯಲ್ಲಿತ್ತಂತೆ! ಹಂದಿಯ ಕತೆಯಿಂದ ಹೂರಣದ ಕತೆಗೆ ಹೊರಳೋಣ.
“ಆಹಾ!” ಎಂದನು ಕಾಸ್ಮಿಕ್.
ಪಿಂಟೋ ದೊರೆ ಸ್ಪೂನಿನ (ಚಮಚ ಅಲ್ಲ) ಸಹಾಯದಿಂದ ಹಲ್ವದ ತುಣುಕು ತಿಂದು “ಭಲೆ!” ಎಂದು ಮರೆಯಾದ.
ಲಕ್ಷ್ಮಿ ಅದರೊಳಗಿದ್ದ ತೀರ್ಥ ಕುಡಿದು “ಏನು ಅಮೃತೋಪಮ!” ಎಂದು ಕತ್ತಲೆಯಲ್ಲಿ ಕರಗಿದ.
ಗೌಡ ಮಾತ್ರ ಕೇಳಿದ, “ಹಲ್ವ ಕಹಿ ಅಲ್ವಾ?”
ರೆಡ್ಡಿ ಅನುಮೋದಿಸಿದ, “ತೀರ್ಥ ಬರೀ ಹೊಗೆ ಪದಾರ್ಥ” ಎಂದು ಉಗಿದ.
ಅಣ್ಣಯ್ಯಪ್ಪ, “ಲಕ್ಷ್ಮಿ ತೀರ್ಥವನ್ನು ಉಗಿದು ಬಾಯಿತೊಳೆಯುತ್ತಿದ್ದುದನ್ನು ನೋಡಿದೆ” ಎಂದು ಗುಳ್ಳೆಯನ್ನು ಒಡೆದ.
“ಬೆಲ್ಲ ಸವಿಯಾಗಿಲ್ಲ” ಕಾಸ್ಮಿಕ್. “ಬೆಂಕಿಗೆ ಶಾಖ ಸಾಲದು” ಶ್ರೀನಿವಾಸ.
“ಆತುರ ಸದಾ ಹಾನಿಕರ” ವಾಸು.
“ಈ ಊರಿನವರಿಗೆ ಸಕ್ಕರೆ ಕುಂಬಳಕಾಯಿ ಬೆಳೆಸಲಿಕ್ಕೆ ಬರುವುದಿಲ್ಲ. ಶುದ್ಧ ಅನಾಗರಿಕರು!” ಎಂದು ನಾನು ಮಾತು ಮುಗಿಸಿದೆ.
ಬಂಡೆ ಚಪಾತಿಯ ಮಾತು ಮುಂದೆಂದೂ ಮರುಕೊಳಿಸಲಿಲ್ಲ.

# ನಾಂದೀ ಮಹೋತ್ಸವ – ಹಿಂದಿನ ರಾತ್ರಿ

**ಅಧ್ಯಾಯ ಇಪ್ಪತ್ತೊಂದು**

ಹದಿನಾಲ್ಕರ ಇರುಳು ಬಲು ಸಂಭ್ರಮದ ರಾತ್ರಿ, ಕಲಿಗಳು ಗಂಡುಗಲಿಗಳಾಗುವ ಅದೇ ಮೊದಲಿನ ನಾಂದಿ. ಸಾಹಸ ಪ್ರದರ್ಶನದ ಶುಭ ನಿರೀಕ್ಷಣೆಯ ಸುಂದರ ಸ್ವಪ್ನ ಕಾಣುತ್ತಿರುವ ಸಂಧಿ. ನಾಳೆ ಮದುವೆಯೆಂದರೆ ಇಂದು ಮದುವೆ ಮನೆ ಹೇಗಿದ್ದೀತೋ ಹಾಗೆ. ಮರು ಮುಂಜಾನೆ ೬ ಗಂಟೆಗೆ ನಾವು ಕುದುರೆಮುಖ ಶಿಖರಾರೋಹಣ ತೊಡಗಬೇಕು. ಆ ಸಾಹಸಕ್ಕೆ ಮೀಸಲಾದದ್ದು ಮೂರು ದಿವಸ – ಒಂದು ಆರೋಹಣ, ಒಂದೂವರೆ ದಿವಸ ಅಲ್ಲಿಯೇ ವಾಸ, ಮೂರನೆಯ ಅಪರಾಹ್ನ ಅವರೋಹಣ. ಆಹಾರ, ಪಾತ್ರೆ, ಬಟ್ಟೆ, ಶಿಕ್ಷಣ ಸಾಮಗ್ರಿ ಎಲ್ಲವೂ ತಲೆ ಹೊರೆಯಲ್ಲಿಯೇ ಮೇಲಕ್ಕೆ ಹೋಗಬೇಕು. ಭಾರ ಹೊತ್ತು ನಡೆಯುವುದೂ ಹುಡುಗರ ಶಿಕ್ಷಣದ ಒಂದು ಅಂಗ. ಹಿಮಾಲಯದಲ್ಲಿ ೪೦ ಪೌಂಡು ಭಾರ ಹೊರಿಸುತ್ತಾರೆಂದ ಪಿಂಟೋ. ಇದು ಹಿಮಾಲಯವಲ್ಲ. ಇಲ್ಲಿ ಹತ್ತುವವರು ಲಕ್ಷ್ಮಿ ಪಿಂಟೋಗಳಲ್ಲ. ಆದ್ದರಿಂದ ಚಿಕ್ಕ ಜನರಿಗೆ, ಚಿಕ್ಕ ಗುಡ್ಡೆಗೆ, ಚಿಕ್ಕ ಭಾರ. ಹೊತ್ತುಕೊಂಡು ಹೋಗಬೇಕಾದ ವಿಶಿಷ್ಟ ಸಾಮಗ್ರಿಗಳನ್ನೂ ಅಡುಗೆಯವರ ಸಲಹೆಯಂತೆ ಒಂದುಗೂಡಿಸಿದೆವು: ಅಕ್ಕಿ, ತರಕಾರಿ, ಚಾ, ಸಕ್ಕರೆ, ಎಣ್ಣೆ, ಹಾಲು ಡಬ್ಬಿ ಇತ್ಯಾದಿ. ಶಿಕ್ಷಣ ಸಾಮಗ್ರಿ, ರೈಫಲ್, ಔಷಧಿಗಳು, ಪಾತ್ರೆ, ಪದಾರ್ಥ – ಒಂದೇ, ಎರಡೇ? ಯಾವುದನ್ನೂ ಬಿಡುವಂತಿಲ್ಲ. ಇವಿಷ್ಟಲ್ಲದೇ ಹುಡುಗರ ಸ್ವಂತ ವಸ್ತುಗಳು – ಕಂಬಳಿ, ಡರಿ, ಊಟದ ತಟ್ಟೆ, ಜೆರ್ಸಿ, ಬಟ್ಟೆ ಇತ್ಯಾದಿ. ವೈಯಕ್ತಿಕ ವಸ್ತುಗಳನ್ನುಳಿದು ಬೇರೆ ಎಲ್ಲವನ್ನೂ ಜೋಡಿಸಿ ಆಯಿತು. ಅವುಗಳ ಪಟ್ಟಿಯೂ ಸಿದ್ಧವಾಯಿತು. ನೂರರಷ್ಟು ಬೇರೆ ಬೇರೆ ಹೆಸರುಗಳಿದ್ದುವು. ಅಕ್ಕಿಯಿಂದ ಹಪ್ಪಳದವರೆಗೆ, ಕೈ ಮಚ್ಚಿನಿಂದ ಸೀಮೆ ಸುಣ್ಣದವರೆಗೆ.

ಸಂಜೆ ಹುಡುಗರನ್ನು ಒಟ್ಟುಗೂಡಿಸಿ, ವಿಷಯ ವಿವರಿಸಿ, ಬರಲು ಸಾಧ್ಯವಾಗದವರು ತಳದಲ್ಲಿಯೇ ಉಳಿಯಬೇಕೆಂದು ಸ್ಪಷ್ಟಪಡಿಸಲಾಯ್ತು. "ಕುದುರೆಮುಖ ಗಂಡುಗಳಿಗೆ ಮಾತ್ರ. ಯಾವುದೇ ಕಾರಣದಿಂದ ನಿಮ್ಮಲ್ಲೆ ಕೆಲವರಿಗೆ ಮೇಲೇರುವುದು ಸಾಧ್ಯವಿಲ್ಲವೆಂದೆನ್ನಿಸಿದರೆ ದಯವಿಟ್ಟು ಪ್ರಾಮಾಣಿಕವಾಗಿ ಹಾಗೆ ತಿಳಿಸಿ ಇಲ್ಲಿಯೇ ಉಳಿಯಿರಿ. ನಡಿಗೆ ದೀರ್ಘ, ಏರು ಕಡಿದು, ಭಾರ ಅತಿ – ಅಂಥಲ್ಲಿ ನಡುದಾರಿಯಲ್ಲಿ ನೀವು ನೀಳಮೊಗ ಮಾಡಿದರೆ, ಏರುಬ್ಬಸ ಬಿಟ್ಟರೆ ಮೊದಲು ನನಗೆ ಬರುವುದು ಕಡುಕೋಪ, ಕರುಣೆ ಅಲ್ಲ. ಧೈರ್ಯ, ಸ್ವಂತೇಚ್ಛೆ ಇರುವವರು ಮಾತ್ರ ಬರಬೇಕು." ಮೂವತ್ತಾರು ಮಂದಿಯಲ್ಲಿ ಐದು ಜನ ತಾವಾಗಿಯೇ ಹಿಂದೆ ನಿಂತರು. ಸಾಮಗ್ರಿ – ಕ್ಯಾಡೆಟ್ ವಿತರಣ ಪಟ್ಟಿಯನ್ನು ಮೊದಲೇ ಬರೆದು ಸಿದ್ಧಪಡಿಸಿಕೊಂಡು ಅದರ ಪ್ರಕಾರ ಅವರಿಗೆ ಎಲ್ಲವನ್ನೂ ಹಂಚಿಕೊಳ್ಳಲಾಯಿತು. ಅವನ್ನು ಹುಡುಗರ ಬೆನ್ನ ಮೇಲಿನ ಹ್ಯಾವರ್ಸ್ಯಾಕಿನೊಳಗೆ ತುಂಬಿಸಿ ಪ್ಯಾಕ್ ಮಾಡಿಯೂ ಆಯಿತು. ಕೋಟ್ ತೊಡುವಷ್ಟು ಸುಲಭವಾಗಿ ಇದನ್ನು ಹಾಕಿಕೊಳ್ಳಬಹುದು, ಕಳಚಿಡಬಹುದು. ಮೂರು 'ಶೆರ್ಪಾ'ರನ್ನು – ಅಂದರೆ ಒಟ್ಟು ಏಳು – ನೇಮಿಸಿಕೊಂಡೆವು. ಅಕ್ಕಿ, ಹಿಟ್ಟು, ಸಕ್ಕರೆ ಮುಂತಾದ ಆಹಾರ ಪದಾರ್ಥ ಅವರ ತಲೆಯ ಮೇಲೆ. ಹುಡುಗರಿಗೆ ಡರಿ, ಬ್ಲಾಂಕೆಟನ್ನು ಕಟ್ಟುವ ವಿಧಾನವನ್ನೂ ತೋರಿಸಿಕೊಡಲಾಯಿತು. ಬೆಟ್ಟ ಏರುವಾಗ ಭಾರ ಬೆನ್ನ ಮೇಲೆ ಬೀಳಬೇಕು, ಜೋಲುತ್ತಿರಬಾರದು. ಬಗ್ಗಿ ನಡೆಯುವಾಗ ಇದರಿಂದ ಸುಲಭವಾಗುವುದು. ಜೋಲುತ್ತಿದ್ದರೆ ಅಥವಾ ಕೈಗಳಿಂದ ನೇಲುತ್ತಿದ್ದರೆ ಬಲು ಬೇಗ ಹೆಗಲಿಗೆ ಇಲ್ಲ ಕೈಗಳಿಗೆ ತ್ರಾಸವಾಗುವುದು. ಮುಖ್ಯ ಇಷ್ಟು: ಕೈಗಳು ಖಾಲಿಯಾಗಿರಬೇಕು. ಆಕಾಶಯಾನಕ್ಕೆ ಗಗನಯಾತ್ರಿಯನ್ನು ಉಡಾಯಿಸುವಾಗ ವಹಿಸುವಷ್ಟೇ ಜಾಗರೂಕತೆ ಇಲ್ಲಿ ವಹಿಸಬೇಕು. ನಡುದಾರಿಯಲ್ಲಿ ಯಾವ ತೊಂದರೆಯೂ ಎದುರಾಗ ಕೂಡದು.



ಡಾಕ್ಟರರು ಮೊದಲು ತಾನು ಬರಲಾರೆ, ಬರಲು ಸಾಧ್ಯವಾಗಲಾರದು ಎಂದವರು ೧೪ರ ರಾತ್ರಿ ನಮ್ಮೆಲ್ಲರ ಪ್ರೋತ್ಸಾಹ ಕಂಡು (ಸ್ವಾರ್ಥವೂ ಇತ್ತು) ಸಂತೋಷದಿಂದ ತಾವೂ ಬರುವುದಾಗಿ ಹೇಳಿದರು. ಅಡುಗೆಯವರನ್ನು ಮೊದಲೇ ಪುಸಲಾಯಿಸಿದ್ದೆವು. ನಮ್ಮ ಹೊಟ್ಟೆಯ, ಆರೋಗ್ಯದ ಹೊಣೆಯನ್ನು ಬೇರೆಯವರು ಹೊತ್ತರೆ ನಮಗೆ ಮಾಡಲಾಗದಿರುವ ಮಹಾಕಾರ್ಯ ಯಾವುದು? ಈ ಭೀಮ ಗೋತ್ರಜರು ಮೈಸೂರು ಪಾಕ, ಬಾದುಷಾ, ಚೌಚೌ ಮಾಡಿ ಮೂರು ದೊಡ್ಡ ಡಬ್ಬಿಗಳಲ್ಲಿ ತುಂಬಿಸಿದರು. ರಾತ್ರಿಯಿಡೀ ನಿದ್ರೆಗೆಟ್ಟು ಬೆಳಗ್ಗಿನ ಉಪಾಹಾರ, ಮಧ್ಯಾಹ್ನದ ಆಹಾರ ಸಿದ್ಧಪಡಿಸಿದರು.

ಹೀಗೆ ೧೫ರಂದು ಮೇಲೆ ಹೋಗುವವರು ೩೧ ಹುಡುಗರು, ಶಿವಪ್ಪ, ನಾನು, ಡಾಕ್ಟರರು, ಅವರ ಆರ್ಡರ್ಲೀ, ಅಡುಗೆಯವರಿಬ್ಬರು, ಖಾನ್ವಿಲ್ಕರಾದಿಯಾಗಿ ಮೂವರು ಸೇನಾ ಸಿಬ್ಬಂದಿ ಜೊತೆಗೆ ಬಂದು ಸೇರಿದ ನನ್ನ ಭಾವ ಪುತ್ತೂರಿನ ಗೌರೀಶಂಕರ, ಸೇವಕರು ೭ ಜನ – ೪೮ ಜನರ ತಂಡ ಕುದುರೆಯೊತ್ತಿದೊಡನೆ ಕುದುರೆಮುಖದ ನೆತ್ತಿಗೆ ನೆಗೆಯಲು ಸಿದ್ಧಬಂದೂಕಿಗಳಾಗಿ ೧೪ರ ರಾತ್ರಿ ಮಲಗಿದೆವು.

# ಆರೋಹಣ ಪರ್ವ

## ಅಧ್ಯಾಯ ಇಪ್ಪತ್ತೆರಡು

ಬುಧವಾರ, ೧೫ನೇ ಫೆಬ್ರುವರಿ, ಶುಭ ಪ್ರಾತಃ ಕಾಲದ ೫.೩೦ ಗಂಟೆ. ಹೂಗಳು ಪರಿಮಳ ಹಾಡಿದುವು. ನಮ್ಮ ೪೮ ಮಂದಿಯ ತಂಡ ವಿಶಿಷ್ಟ ಸಾಮಗ್ರಿಗಳನ್ನೊಳಗೊಂಡು, ಪ್ರತಿಯೊಬ್ಬನೂ ಕೈಯಲ್ಲಿ ದೊಡ್ಡ ಬಡಿಗೆ ಹಿಡಿದು, ಮೇಲೇರಲು ಸಿದ್ಧವಾಗಿ ನಿಂತಿತು. ಪುನಃ ಕೂಲಂಕಷವಾಗಿ ಪರಿಶೀಲಿಸಿದ ಬಳಿಕ ದೊರೆಗಳಿಗೆ ವರದಿ ಸಲ್ಲಿಸಿದೆ. ಅವರು ಹೀಗೆಂದರು, "ನನಗೆ ಅತ್ಯಂತ ಹೆಮ್ಮೆಯ ದಿನವಿಂದು. ನಮ್ಮ ಆರೆಂಟು ತಿಂಗಳುಗಳ ಕನಸು ನನಸಾಗುತ್ತಿರುವ, ದೀರ್ಘ ಶ್ರಮ ಫಲವೀಯುವ ಸುಮುಹೂರ್ತ ಈಗ ಬಂದಿದೆ. ನಿಮ್ಮ ಸಾಹಸ ಜಯಪ್ರದವಾಗಲಿ. ನಿಮಗೆ ಮಂಗಳವಾಗಲಿ. ಹೋಗಿ ಸುಖವಾಗಿ ಮರಳಿ ಬನ್ನಿ. ನಾನಿನ್ನು ನಿಮ್ಮನ್ನು ಸ್ವಾಗತಿಸುವುದು ಬೆಂಗಳೂರಿನಲ್ಲಿಯೇ."

೧೨ನೇ ಮೈಸೂರು ಹೊರಟಿತು.
ಜಯಜಯಕಾರ ಗಿರಿಗಹ್ವರಗಳಲ್ಲಿ ಅನುರಣಿತವಾಗುತ್ತಿದ್ದಂತೆ, ತುಪಾಕಿ, ಸಿಡಿಮದ್ದುಗಳ ಆಸ್ಫೋಟನೆ ದಿಕ್ಕುಗಳನ್ನು ಭೇದಿಸುತ್ತಿದ್ದಂತೆ ೧೨ನೇ ಮೈಸೂರು ಹೊರಟಿತು.
ತಂಗಾಳಿ ಮೃದುವಾಗಿ ತೀಡುತ್ತಿದ್ದಂತೆ, ಸ್ವಚ್ಛಾಕಾಶದಲ್ಲಿ ತೀಕ್ಷ್ಣ ನಕ್ಷತ್ರಗಳು ಮಂಗಳ ಹಾಡುತ್ತಿದ್ದಂತೆ, ಗಗನದೆಡೆಗೆ ೧೨ನೇ ಮೈಸೂರು ಹೊರಟಿತು.
ಮಧ್ಯಾಕಾಶದಲ್ಲಿ ವೃಶ್ಚಿಕ ರಾಶಿ ಪ್ರಶ್ನಾರೂಪದಲ್ಲಿ ನಿಂತಿತ್ತು. ಧನೂರಾಶಿಯ ಕಿರಿ ಚಮಚ ಮಕ್ಕಳಿಗೆ ಹಾಲೂಡಿಸುವ ಭಂಗಿಯಲ್ಲಿತ್ತು. ಕಾಡು ನಿಶ್ಶಬ್ದ. ಪೂರ್ವ ದಿಗಂತದಲ್ಲಿ ಕ್ಷಣ ಕ್ಷಣ ಷೋಡಶಿಯ ಮುಖವರ್ಣವಿನ್ಯಾಸ ನಲಿಯುತ್ತಿತ್ತು. ಈ ಸಮಯದಲ್ಲಿ ೧೨ನೇ ಮೈಸೂರು ಹೊರಟಿತು.

ದೊರೆಗಳು ಬಲುದೂರ ಬಂದು ನಮ್ಮನ್ನು ಬೀಳ್ಕೊಟ್ಟರು. ಸಾಗರೋಲ್ಲಂಘನ ಪ್ರಾರಂಭದ ಹನುಮಂತನ ಮನಸ್ಥಿತಿ ನಮ್ಮದಾಗಿತ್ತು. ಸ್ವಾಮಿ, ನಿಸಾರರು ತಳದ ಶಿಬಿರಾಧಿಪತಿಗಳಾಗಿ ನಿಂತರು. ನಿಸಾರರೆಂದರು,

ಅಲ್ಲಿ ನಾಡಿನೆತ್ತರದಲಿ
ನಕ್ಷತ್ರಗಳ ಚಿರವಿಲಾಪದಲ್ಲಿ ಸಾಹಸಗೈವ ನಿಮಗೆ
ಇದೊ ವಂದನೆ – ಅಭಿ
ವಂದನೆ.

"ಹೋಗ್ಬಿಟ್ಟು ಬನ್ನಿ ಸಾರ್! ಈ ಕಡೆ ಚಿಂತೆ ಮಾಡಲೇಬೇಡಿ. ನಿಮಗೇನು ಸಹಾಯ ಬೇಕಾದರೂ ಹೇಳಿ ಕಳಿಸಿ" ಎಂದು ಕರುಣಾರ್ದ್ರ ಹೃದಯದಿಂದ ಸ್ವಾಮಿಯವರೆಂದರು. ದೈಹಿಕ ಕಾರಣಗಳಿಂದ ಬರಲಾಗದ ಹುಡುಗರ ಮೋರೆ ನೋಡಿದಾಗ ಕಿಂದರಿ ಜೋಗಿಯ ಹಿಂದೆ ಹೋಗಲಾರದೇ ಉಳಿದುಹೋದ ಹುಡುಗನ ನೆನಪು ಬರುತ್ತಿತ್ತು. "ಏನ್ಮಾಡೋದ್ಸಾಮೀ! ಲಾರಿ ಐತೆ. ಇಲ್ಲಿ ಡೂಟಿ ನೋಡ್ಬೇಕಲ್ಲಾ. ಇಲ್ಲವಾದ್ರೆ ನಾನೂ ಬಂದ್ಬಿಡೋವೆ. ಇದೆಲ್ಲ ಏನು ಮಹಾ" ಎಂದು ಉದ್ಗಾರವೆತ್ತಿದ ಅನ್ಸಾರಿ. ಅವನು ಮಲಯಾ ಬರ್ಮ ಜಂಗಲುಗಳಲ್ಲಿ ತಿಂಗಳುಗಟ್ಟಳೆ ಅಲೆದು (ಎರಡನೇ ಮಹಾಯುದ್ಧದಲ್ಲಿ) ಇಂಡಿಯಾಕ್ಕೆ ಮರಳಿಬಂದ ದಿಟ್ಟ.

ದೊರೆಗಳ ತಂದೆಯವರ ಪರಿಸ್ಥಿತಿ ಸ್ವಲ್ಪ ಕೆಟ್ಟಿತ್ತಂತೆ. ಹಾಗಾಗಿ ಅವರು ಅದೇ ದಿನ ಬೆಂಗಳೂರಿಗೆ ಮರಳುವವರಿದ್ದರು. "ಸಾಧ್ಯವಾದರೆ ಅಶ್ವತ್ಥರನ್ನು ಕಳಿಸುತ್ತೇನೆ, ವರ್ಗ ಬೇರೆ ಇದೆಯಲ್ಲ. ಇನ್ನುಳಿದುದನ್ನೆಲ್ಲ ನೀನೇ ಸುಧಾರಿಸಬೇಕು" ಎಂದು ಮರಳಿದರು.

ನಮ್ಮ ಕುದುರೆಮುಖ ಗೂಡ್ಸ್ ಬಂಡಿಯ ಎಂಜಿನ್ ಶಿವಪ್ಪ. LV (last vehicle) ನಾನು, ಕಂಬಿ ಮೆಂಗಿಲ ಶೇಣವ. ಈ ಬಂಡಿ ಇರುವೆಗಳ ಸಾಲಿನಂತೆ ಆ ಕತ್ತಲೆಯಲ್ಲಿ ಕಾಡಿನ ತರಗೆಲೆಗಳ ಮೇಲೆ ಹರಿಯುತ್ತ ಸಾಗಿತ್ತು. ಅರುಣೋದಯ ಕಾಲದಲ್ಲಿ ಕಾಡು ಮಸಿಗಪ್ಪು, ಲಾಂದ್ರ ಟಾರ್ಚುಗಳ ಬೆಳಕು ಕತ್ತಲೆಯೊಡನೆ ಕಣ್ಣು ಮುಚ್ಚಾಲೆಯಾಟವಾಡುತ್ತ ಕತ್ತಲೆಯ ವೈಭವವನ್ನು ಇನ್ನೂ ಹೆಚ್ಚಗೆ ತಿಳಿಯಲು ಸಹಾಯ ಮಾಡುತ್ತಿದ್ದುವು:

ಕತ್ತಲೊಡನೆ ಪಂತವಿಲ್ಲವವಕೆ
ಅದರೊಡನಜ್ಜಿಯಾಟದ ಬಯಕೆ!
**– ಪುತಿನ –**

ದೂರದಲ್ಲಿ ಕಾಡು ಮರಗಳ ಮರೆಯಲ್ಲಿ ಬೆಟ್ಟಗಳ ಅಂಚಿನಿಂದಾಚೆಗೆ ಬಣ್ಣಗಳ ಆಂದೋಳನವೇ ನಡೆದಿತ್ತು. ಆ ವರ್ಣಪಟಲದ ಸಂಚಾರ ತೀವ್ರವಾದಂತೆ ಕತ್ತಲೆಯಾಟ ತಗ್ಗತೊಡಗಿತು. ಬೆಳ್ಳನೆ ಬೆಳಗಾಯಿತು! ನಕ್ಷತ್ರಚಿತ್ರಗಳು ಯಕ್ಷಗಾನ ಬಯಲಾಟದಲ್ಲಿ ಬಣ್ಣದ ವೇಷಧಾರಿಗಳು ರಾತ್ರಿ ಮುಗಿಯುವಾಗ ಕಾಣುವಂತೆ ತೇಜೋಹೀನವಾಗಿ ಕಂಡುವು. ಸ್ವಲ್ಪ ಹೊತ್ತಿನಲ್ಲಿಯೇ ರಂಗಸ್ಥಳದಲ್ಲೇ ಅಂತರ್ಧಾನವಾದುವು. ಮೆಂಗಿಲ ಶೇಣವ, "ಓ ಹೋ ಹೋ ಹೋಯ್" ಎಂದು ಕೇಕೆಯಿಡುತ್ತ ಹಿಂದಿನವರ ಮರುಕೂಗನ್ನು ಆಲಿಸುತ್ತ ಮುಂದೆ ಮುಂದೆ ದೊಣ್ಣೇ ಬೀಸಿ ಬೀಸಿ ನಡೆದ. ತಲೆಯ ಮೇಲೆ ಅವನಿಗೂ ಒಂದು ಹೊರೆಯಿತ್ತು. ಕಾಡಿನ ನರುಗಂಪು, ಮುಂಜಾವಿನ ಚೈತನ್ಯದ ಮಾದಕತೆ ಇವುಗಳಿಂದ ಒಂದು ಗಂಟೆಯ ನಿರಂತರ ನಡಿಗೆ ನಮಗೆ ತಿಳಿದದ್ದು ನೀರ ಬುಗ್ಗೆಯ ಸಮೀಪ ಹರಡಿ ಕುಳಿತಾಗಲೇ. ಮೆಂಗಿಲ ಶೇಣವನ ಅಳತೆಯ ಪ್ರಕಾರ ನಾವು ನಡೆದದ್ದು ಕೇವಲ ಒಂದೇ ಮೈಲು!

ಟೊಮೆಟೋ, ಬಿಸ್ಕತ್, ನೀರು ಸೇವಿಸಿ ಹೊಸ ಹುರುಪಿನಿಂದ ಮುಂದಿನ ಪ್ರಯಾಣ ತೊಡಗಿದೆವು. ಬೆಳ್ಳಂ ಬೆಳಗು ಸೂರೆಹೋಗಿತ್ತು. ಕುರುಚಲು ಗಿಡ, ಮುಳ್ಳು, ಪೊದೆ ಎಲ್ಲವನ್ನೂ ದಾಟಿ ಗೊಂಡಾರಣ್ಯದ ನಡುವೆ ದಾರಿ ಸಾಗಿತ್ತು. ಎಲ್ಲಿವರೆಗೋ ಜೀಪ್ ಹೋಗಲು ಮಾಡಿದ ಬಳಸು ದಾರಿ ಬೆಟ್ಟದ ಮೈಯನ್ನು ಆಧರಿಸಿ ಆವರಿಸಿ ಹರಿಯುತ್ತಿತ್ತು. ಆದರೆ ನಮ್ಮದು ನೇರ ಕಾಲ್ದಾರಿ. ಜೀಪ್ ದಾರಿಯ ಎರಡು ಫರ್ಲಾಂಗನ್ನು ನಾವು ನೂರು ಹೆಜ್ಜೆಗಳಲ್ಲಿ ನೇರವಾಗಿ ಹತ್ತಿ ಮುಗಿಸುತ್ತಿದ್ದೆವು. ಆದರೆ ಎಂಥ ಹೆಜ್ಜೆಗಳವು! ಸ್ವಲ್ಪ ಮುಂದಕ್ಕೆ ಬಗ್ಗಿ ಊರುಗೋಲನ್ನೂರಿ ಹೆಜ್ಜೆಗೂ ಉಸಿರಾಟಕ್ಕೂ ಲಯ ಹೊಂದಿಸಿ ನಿಧಾನವಾಗಿ ನಡೆಯಲು ಹೊರಟರೆ ಎಷ್ಟು ದೂರ ನಡೆದರೂ ಆಯಾಸವಾಗುವುದಿಲ್ಲ. ಉಸಿರು ಸೇದಿ ಮೇಲೆ ಮೇಲೆ ಬರುವುದಿಲ್ಲ. ಬೆಟ್ಟವೇರುವಾಗಲಂತೂ ಆರಂಭ ಶೂರತ್ವ ಸಲ್ಲದೇ ಸಲ್ಲದು. ಇಲ್ಲಿ ಬೇಕಾದದ್ದು ಮಿಂಚುಳ್ಳಿ ಚಿಮ್ಮಿಕೆಯಲ್ಲ, ಗಜಗಂಭೀರ ಗಮನ.

ದೈತ್ಯಾಕಾರದ ಮರಗಳೆಡೆಯಿಂದ ದೂರದ ಚಿಕ್ಕ ಚಿಕ್ಕ ದಿಬ್ಬಗಳ ಮೇಲೆ ಸೂರ್ಯ ಕುಣಿಯುತ್ತಿದ್ದುದನ್ನು ಕಂಡೆವು. ಎತ್ತರದ ಹಲವಾರು ಬೋಳು ಗುಡ್ಡೆಗಳು 'ರಸಮೂರ್ಛೆ'ಯಲ್ಲಿ ಮಲಗಿದ್ದುವು. ಸುತ್ತಲಿನ ಕಾಡು ನಡೆಯಲಿರುವ ದಾರಿ ಮತ್ತು ಏರಲಿರುವ ಎತ್ತರ ಬಹಳ ಉಂಟು ಎಂದು ಎಚ್ಚರಿಸುತ್ತಿತ್ತು. ನಮ್ಮ ಮೇಲೆಯೇ ಇದ್ದ ಶಿಖರ ನಮಗೆ ಕಾಣುತ್ತಿರಲಿಲ್ಲ. ಏಕೆಂದರೆ ನಾವು ಬೆಟ್ಟದ ಮೈ ಮೇಲಿನ ಕೊರಕಲು ಕಾಡು ಮೇಡುಗಳಲ್ಲಿ ನಮ್ಮ ತಲೆ ಕೆಡಿಸಿಕೊಂಡಿದ್ದೆವು. ಈ ಗೊಂದಲದ ಮಧ್ಯೆ ದಾರಿಯು ಇಲ್ಲ. ಆದರೆ ದಾರಿ ಮಾಡಿ ದಿಕ್ಕು ತಪ್ಪದಂತೆ ಕೊಂಡೊಯ್ಯುತ್ತಿದ್ದವ ಮೆಂಗಿಲ ಶೇಣವ. ಬೆಟ್ಟ ಏರುವಾಗ ದಿಕ್ಕು, ದಾರಿ ತಪ್ಪುವುದು ಬಲು ಸುಲಭ. ಅಸಂಖ್ಯ ಕಾಲು ದಾರಿಗಳು ಅಲ್ಲಿ ಸಂಧಿಸುತ್ತಿರುತ್ತವೆ. ಈ ತಂತೀ ಒಂದರಿಯಲ್ಲಿ ಅತ್ಯಲ್ಪ ವ್ಯತ್ಯಾಸವಾದರೂ ನಾವು ಎಲ್ಲಿಗೋ ಹೋಗಿರುತ್ತೇವೆ. ಎಷ್ಟೊ ಸಲ ಹೊರಟಲ್ಲಿಗೇ ಮರಳಿ ಬಂದು ಭೂಮಿ ಉರುಟು ಎನ್ನುವುದನ್ನು ಚೆನ್ನಾಗಿ ತಿಳಿದುಕೊಂಡಿರುತ್ತೇವೆ. ಇನ್ನೊಂದು ಗಂಟೆ ಚುರುಕಾಗಿ ನಡೆದೆವು. ಗಂಟೆ ೮ ದಾಟಿತ್ತು. ಪುನಃ ಐದು ಮಿನಿಟುಗಳ ವಿರಾಮ.

"ಈಗೆಷ್ಟು ದೂರ, ಅಜ್ಜಾ?"
"ಎರಡರಿಂದ ಎರಡೂವರೆ ಮೈಲಿನ ಒಳಗೆ, ಹ್ಞಾಂ"
"ಅಷ್ಟೇ!?"
"ಮತ್ತೆಂಥಾದ್ದು! ನೀವು ಹೀಗೆ ನಡೆದರೆ ಸಾಯಂಕಾಲ ಹೇವಳಕ್ಕೆ."
ಹತ್ತು ಮೈಲು ಸುತ್ತಿ ಹತ್ತುವಾಗ ಹೇವಳ ಗ್ರಾಮ. ಅಲ್ಲಿ ನಾವು ಮಧ್ಯಾಹ್ನದ ಊಟ ತೀರಿಸಬೇಕೆಂದು ಯೋಜನೆ. ಆದ್ರೆ ಈ ಹುಡುಗರ ನಡಿಗೆ ಬಲು ನಿಧಾನವಾಯಿತಲ್ಲ. ಆಗ ವಿರಾಮ ಸಮಯವಾಗಿದ್ದರೂ ಹುಡುಗರು ಕೂರಲಿಲ್ಲ. "ಆಡುಪಾಂಬೇ" (ಪುನ್ನಾಗವರಾಳಿ) ರಾಗದಲ್ಲಿ –

ಕಾಡಿಗ್‌ಹೋಗುವೆವು, ವಿ–
ಶ್ವೇಶ್ವರನ ನೋಡೆ,
ಕಾಡು ಬಂತು ಕತ್ತಲೆ ಆಯಿತು
ಕಳ್ಳರು ಬಂದರು
ಅಯ್ಯೋ ಕಚಿಪಿಚಿಕಚಿಪಿಚಿ!

ಎಂದು ಅಭಿನಯಪೂರ್ವಕವಾಗಿ ಹಾಡಿದರು, ಕುಣಿದರು. ಪಾಪ, ವಿಧವೆಯರಂತೆ. ಪುಣ್ಯಸಂಪಾದನೆಗಾಗಿ ಹೋಗುತ್ತಿದ್ದಾಗ ಹೀಗಾಗಬೇಕೆ? ಕಚಿಪಿಚಿ ಎಂದು ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಹರಡಿ ಹೋಗುವಾಗಲಂತೂ ನಮಗೆ ಬಲು ಸಂಕಟವಾಯಿತು. ಶೇಣವನೂ ಇವರ ಜತೆ ಕುಣಿದು ಅಭಿನಯಿಸಿದ.

ಮುಂದಿನ ನಡಿಗೆ ಇನ್ನಷ್ಟು ಚುರುಕಾಗಬೇಕೆಂದು ಆದೇಶ ಕಳಿಸಿದೆ. "ಆ ಅಜ್ಜನ ಹುರುಪು ನಮಗೆ ಬರಬಾರದೇ" ಎಂದು ಮೂದಲಿಸಿದೆ. ಬೆಟ್ಟ ಏರಲು ಅಭ್ಯಾಸವಿರಬೇಕು. ದಿನ ಬೆಳಗಾದರೆ ಸೈಕಲ್, ಸಿಟಿಬಸ್, ಪೇಟೆಯ ಧೂಳು, ಹೊಗೆ ಇವುಗಳ ಮಧ್ಯೆ ಬೆಳೆಯುವ ಮಕ್ಕಳು, ಮನೆಯಲ್ಲೂ ಇಕ್ಕಟ್ಟು, ಶಾಲೆ ಕಾಲೇಜುಗಳಲ್ಲಿಯೂ ಕಿಷ್ಕಿಂದೆ, ರೇಷನ್ ಇಂಥ ವಾತಾವರಣದಿಂದ ಒಮ್ಮೆಲೇ ಮುಕ್ತರಾಗಿ ಅರಣ್ಯ ಪರ್ವತಗಳ ಹುಚ್ಚುಹೊಳೆಗೆ ಬಿದ್ದರೆ ತತ್ತರಿಸಿ ಹೋಗುತ್ತಾರೆ. ಒಂದು ಸಲ ಮುಳುಗಿ ನೀರು ಕುಡಿದ ಹೊರತು ಸಾಹಸವೆಂದರೇನೆಂದೂ ತಿಳಿಯದ ದುರ್ಬಲಿಗಳಾಗಿರುತ್ತಾರೆ. ನಡಿಗೆ ಚುರುಕಾಯಿತು. ಏರು ಕಡಿದಾಯಿತು. ಹೊತ್ತ ಸಾಮಾನಿನ ಭಾರ ಹೆಚ್ಚಾಯಿತು.
"ವೇಗ ಒಂದು ವಿಧದ ಶಕ್ತಿ ಪ್ರಕಾರವಷ್ಟೆ. ಶಕ್ತಿಗೆ ದ್ರವ್ಯರಾಶಿಯಿದೆಯಲ್ಲವೇ ಸಾರ್ ಐನ್ಸ್ಟೈನ್ ಪ್ರಕಾರ? ಆದ್ದರಿಂದ ನಮ್ಮ ನಡಿಗೆಯ ವೇಗ ಹೆಚ್ಚಾದಂತೆ ಸಾಮಾನಿನ ಭಾರ ಹೆಚ್ಚಾಗುವುದು ಈ ಕಾರಣದಿಂದಾಗಿರಬಹುದೇ?" ಎಂದು ಕಾಸ್ಮಿಕ್ ಪ್ರಶ್ನಿಸಿದ.
"ಖಂಡಿತವಾಗಿಯೂ ಅಲ್ಲ ಎರಡನೆಯ ಪ್ರಶ್ನೆಗೆ, ಮೊದಲನೆಯ ಪ್ರಶ್ನೆಗೆ ಅಷ್ಟೇ ಖಂಡಿತವಾಗಿ ಹೌದು."
"ಅಂದರೆ, ಸಾರ್?"
"ಐನ್ಸ್ಟೈನರ ವೇಗ – ಶಕ್ತಿ – ರಾಶಿ ಅರಿವಾಗುವುದು ಬೆಳಕಿನ ವೇಗ ಅಥವಾ ಅದರ ಸಮೀಪದ ವೇಗದಲ್ಲಿ ಮಾತ್ರ. ನಮಗೀಗ ಭಾರ ಹೆಚ್ಚಾದಂತೆ ಅನ್ನಿಸುವುದು, ಒಂದು, ಹೊತ್ತ ಸಾಮಾನಿನ ಒತ್ತಡ ಹೆಚ್ಚಾಗುವುದರಿಂದ ಮತ್ತು ಎರಡು, ಮನಸ್ಸಿನೊಳಗೆ ನಾವೇನೋ ಮಹಾ ಸಾಧಿಸುತ್ತಿದ್ದೇವೆ ಎಂಬ ಭ್ರಮೆ ಮೂಡುವುದರಿಂದ."

ಐನ್‌ಸ್ಟೈನೋ ನಾನ್‌ಸ್ಟೈನೋ ಭಾರದಿಂದ ಹುಡುಗರು ತೊನೆದಾಡಿದರು. ಹ್ಯಾವರ್ ಸ್ಯಾಕ್ ಕುಸಿಯಿತು. ಪಕ್ಕಕ್ಕೆ ಕಟ್ಟಿದ್ದ ಬ್ಲಾಂಕೆಟ್ ಡರಿಗಳ ಗಂಟು ಸಡಿಲವಾಗಿ ಜಾರಿದುವು. ಶ್ರೀಧರನ್, ವಾಸು ಅಡ್ಡಗಾಲಿಡುತ್ತ ಹಿಂದೆ ಹಿಂದೆ ಉಳಿದರು. ಇವರ ಜೊತೆಗೆ ನಾಗರಾಜ, ಜಗನ್ನಾಥ, ಚಂದ್ರಶೇಖರ. ಗೂಡ್ಸ್ ಬಂಡಿ ತುಂಡಾಯಿತು. ಪ್ರತಿಯೊಬ್ಬನಿಗೂ ನಿರಖಾದ ಸ್ಥಾನವನ್ನು ಮೊದಲೇ ವಿಧಿಸಿದ್ದೆವು. ಹಾಗೆ ಮಾಡದಿದ್ದರೆ ಉದ್ದವಾದ ಅಂಕುಡೊಂಕಾದ ದಾರಿಯಲ್ಲಿ ಯಾರೋ ಒಬ್ಬ ಮಧ್ಯೆ ಜಾರಿದರೆ, ಬಿದ್ದರೆ ಇಲ್ಲ ಕಣ್ಣು ತಪ್ಪಿಸಲು ನೋಡಿದರೆ ಪತ್ತೆ ಹಚ್ಚುವುದು ಸಾಧ್ಯವಿಲ್ಲ. ಈ ತರುಣರು ಹೀಗೆ ಹಿಂದೆ ಹಿಂದೆ ನಿಂತು ಅಳುಮೋರೆಯಿಂದ ಇತರರ ಮುನ್ನಡೆಗೆ ಅಡ್ಡಿ ಮಾಡಿದಾಗ ನನಗೆ ಬಂದದ್ದು ಮರುಕ ಖಂಡಿತ ಅಲ್ಲ – ಸಿಟ್ಟು.
"ಸ್ವಲ್ಪ ವಿಶ್ರಾಂತಿ ಪಡೆದು ಹಿಂದಿನಿಂದ ಬರುತ್ತೇನೆ" ಎಂದನೊಬ್ಬ.
"ನಿನ್ನೆ ಏನು ಹೇಳಿದ್ದು? ೧೨ನೇ ಮೈಸೂರಿಗೆ ವಿಶ್ರಾಂತಿ ಪದ ಗೊತ್ತಿಲ್ಲ. ನಿನಗೆ ಎರಡೇ ದಾರಿ – ಒಂದೋ ಈ ಕ್ಷಣ ಹಿಂದೆ ಹೋಗಿ ತಳದ ಶಿಬಿರದಲ್ಲಿ ವಿಶ್ರಾಂತಿ ಪಡೆ. ಇಲ್ಲ ಚುರುಕಾಗಿ ಲೈನಿನಲ್ಲಿ ನಡೆ. ಕೂಟಕ್ಕೆ ಸಾಮೂಹಿಕವಾಗಿ ದೊರೆಯದ ವಿಶ್ರಾಂತಿ ನಿನಗೆ ಪ್ರತ್ಯೇಕವಾಗಿ ಸಿಕ್ಕಲಾರದು. ನಿನ್ನ ಭಾರವನ್ನು ನೀನೇ ಹೊರತಕ್ಕದ್ದು. ನರಪೇತಲರು ಇಲ್ಲಿ ಬೇಡ."

ಆಯಾಸವೆನ್ನುವುದು ಮನಸ್ಸಿನ ಒಂದು ಸ್ಥಿತಿಯೇ ವಿನಾ ದೇಹದ್ದಲ್ಲ ಎಂದು ನಾನು ಪ್ರಾಯೋಗಿಕವಾಗಿ ಕಂಡುಕೊಂಡಿದ್ದೇನೆ. ಯುಕ್ತಾಹಾರ, ಯುಕ್ತವಿಹಾರ – ಶ್ರಮವೆಲ್ಲಿಂದ ಬರಬೇಕು! ಮನಸ್ಸು ದೇಹವಿಜ್ಞಾನಗಳನ್ನು ಅಭ್ಯಾಸ ಮಾಡಿದವರು ಒಂದು ವಿಚಾರವನ್ನು ಖಚಿತವಾಗಿ ಹೇಳಿದ್ದಾರೆ: ಒಬ್ಬ ಮನುಷ್ಯ ಸಾಮಾನ್ಯವಾಗಿ ಅವನ ಮನಸ್ಸಿನ ಮತ್ತು ದೇಹದ ಶಕ್ತಿಗಳ ಅರ್ಧದಷ್ಟನ್ನೂ ಸರಿಯಾಗಿ ಉಪಯೋಗಿಸುತ್ತಿಲ್ಲ. ಇವು ಅತ್ಯಂತ ಸೊಗಸಾದ ರಚನೆಗಳು ಎಂದು, ಗಾಣದೆತ್ತಿನ ದಾರಿಯಿಂದ ಸ್ವಲ್ಪ ಹೊರಗೆ ಅವನು ಚಲಿಸಿದರೆ ಅತ್ಯಾಯಾಸಗೊಂಡಂತೆ ಭಾವಿಸುತ್ತಾನೆ.

ಇಪ್ಪತ್ತರ ಹರೆಯದವರು ಸ್ವಯಂಸ್ಫೂರ್ತಿಯಿಂದ ಸಾಹಸ ಪ್ರದರ್ಶನಕ್ಕಾಗಿಯೇ ಸಾಕಷ್ಟು ಅಭ್ಯಾಸ ಮಾಡಿ ಬಂದ ಹುಡುಗರು ಅದೆಂಥ ಚೇತನದ ಚಿಲುಮೆಗಳಾಗಿರಬೇಡ? ಇಂಥವರಿಗೆ ವಿಶ್ರಾಂತಿಯೇ? ಈ ಹಿನ್ನೆಲೆಯಲ್ಲಿ ಆ ಎತ್ತರದಲ್ಲಿ ಕರುಣೆ ಅನುಕಂಪ ಪದಗಳಿಗೆ ಅರ್ಥ ಬೇರೆ. ಸ್ಫೂರ್ತಿ ಸಾಂಕ್ರಾಮಿಕವಲ್ಲ. ಆಯಾಸ ಹೌದು. ಆಯಾಸಗೊಂಡವರ ಪತ್ತೆ ಮತ್ತೆ ಆಗಲಿಲ್ಲ. ಅಲ್ಲಲ್ಲಿ ಏರುಬ್ಬಸ ಬಿಡುತ್ತ ಕುಳಿತದ್ದೂ ಕಾಣಲಿಲ್ಲ.

ಕಾಡಿನ ಸೆರಗು ದಾಟಿ, ಚಿಕ್ಕಪುಟ್ಟ ಗುಡ್ಡೆಗಳ ಕಲ್ಲು ರಾಶಿಗಳ ತಲೆ ತುಳಿದು ನಡಿಗೆ ಮುಂದುವರಿಯಿತು. ಅಲ್ಲೆಲ್ಲ ಆಳೆತ್ತರ ಬೆಳೆದಿದ್ದ ಹುಲ್ಲು ಕೇವಲ ಕೆಲವೇ ದಿನಗಳ ಹಿಂದೆ ಬೆಂಕಿಬಿದ್ದು ಸುಟ್ಟು ಮಸಿಯಾಗಿತ್ತು. ಆ ನಿರ್ಜನ ಪ್ರದೇಶದಲ್ಲಿ ಹುಲ್ಲು ಹುಟ್ಟುವುದೇಕೋ? ಸುಟ್ಟು ಹೋಗುವುದೇಕೋ? ದಾರಿಯಲ್ಲಿ

(ದಾರಿಯಿಲ್ಲ – ನಡೆದದ್ದೇ ದಾರಿ) ಎಲ್ಲಿಯೂ ಜನವಸತಿ ಇಲ್ಲ. ಯಾವ ತರಹದ ಬೇಸಾಯವೂ ಇಲ್ಲ. ನಾಗರಿಕತೆಯ ಜಾಡ್ಯವೇ ಅಲ್ಲಿಲ್ಲ. ಒಂದು ಕೊರಕಲಿಗಾಗಿ ಸಾಗುವಾಗ 'ಈ ದಾರಿಗಾಗಿ ಬರುವವರು ವನೆಯಲ್ಲಿ ಹೆಂಡತಿ ಮಕ್ಕಳಿಗೆ ಹೇಳಿ ಬರುವುದು ಒಳ್ಳೆಯದು. ಕ್ರೂರ ಮೃಗಗಳಿವೆ – ಎಚ್ಚರಿಕೆ!' ಎಂದು ಬಲವಾಗಿ ಕೆತ್ತಲ್ಪಟ್ಟಿತ್ತು. ಹೇಗೂ ನಾವು ದೊಡ್ಡ ಪಟಾಲಾಮ್. ಮೇಲಾಗಿ ರೈಫಲ್ ಇದೆಯಲ್ಲ. ಅಂತೂ ಆ ಬರೆಹದ ಹಿಂದೆ ಕತೆ ಅಡಗಿರಬಹುದು. ಮುಂದೆ ನಿಂತಾಗ ಶೇಣವನನ್ನು ಕೇಳಿದರಾಯಿತು ಎಂದುಕೊಂಡೆ.

೧೨ ಗಂಟೆ ದಾಟಿತು. ನಮ್ಮ ಪ್ರಯಾಣ ಕಾಲ ೬ ಗಂಟೆಯನ್ನು ಮೀರಿತ್ತು. ಬೋಳು ಗುಡ್ಡೆಯ ಮೇಲೆ ಎಲ್ಲಿಗೋ ಏನೋ ಗೊತ್ತಿಲ್ಲದೇ ನಡೆಯುತ್ತಿದ್ದೇವೆ. ಕಾಡುಗಳ ನೆರಳಿನಿಂದ ಪಾರಾಗಿ ಬಂದಿದ್ದೇವೆ. ಎದುರಿಗೆ ಗುಡ್ಡೆ ಗುಡ್ಡೆಗಳ ರಾಶಿ. ಹಿಂದೆ ಇಳಿದಿಳಿದು ಮಾಯವಾಗುವ ಕಾಡಿನ ಹಸುರು, ಕೊರಕಲಿನ ಮಾಯೆ.

"ಅಜ್ಜಾ! ದೂರವಿನ್ನೆಷ್ಟು?"

"ಓ ಇಲ್ಲಿಯೇ – ಅದು ನೋಡಿ ಗದ್ದೆ ಅಲ್ಲವೋ? ಅದರ ಆಚೆ ಬದಿ ಹೇವಳ ಮನೆ."

"ಹಾಗಾದರೆ ೧೦ ಮೈಲು ಬಂದಂತಾಯಿತೇ?"

"ಒಂದು ಅಡಿಯೂ ಕಮ್ಮಿ ಸುತರಾಂ ಇಲ್ಲ." ಮೆಂಗಿಲ ಶೇಣವನ ಖಂಡಿತ ವಾಣಿ.

"ಅಲ್ಲ, ಹಿಂದೆ ನೀವು ಹೇಳಿದ ದೂರ ಎಲ್ಲ ತಪ್ಪೇ? ಒಳ್ಳೇ ಜೋಕುಗಾರರಪ್ಪ ನೀವು!"

ಹೀಗೆ ಹುಡುಗರಿಗೆ ಹುರಿದುಂಬಿಸಿ, ನಡೆದ ದೂರವನ್ನು ಕಡಿಮೆಯೆಂದು ಹೇಳಿ ಬೆಳಗ್ಗಿನ ತಂಪಿನಲ್ಲಿ ದೂರ ದೂರ ಚುರುಕಾಗಿ ನಡೆಸಿ ದೂರ ತಿಳಿಯದಂತೆ ನಾಲ್ಕು ಸಾವಿರ ಅಡಿ ಎತ್ತರಕ್ಕೆ ತಲಪಿಸಿದ ಮೆಂಗಿಲ ಶೇಣವ. ಅಲ್ಲಿ ಕಾಫಿ ತೋಟ, ಏಲಕ್ಕಿ ಫಸಲು, ಬಾಳೆ ಮರ, ಕಿತ್ತಳೆ, ಸಾಲು ಗದ್ದೆ ಇದ್ದುವು. ಮಲೆನಾಡಿನ ಒಣ ದನಗಳ ಹಿಂಡು ಗಾಬರಿಯಿಂದ ಚಲ್ಲಾಪಿಲ್ಲಿಯಾಯಿತು. 'ಕ್ರೂರ ಮೃಗಗಳಿವೆ' ಕಂಡ ಬೆಂಗಳೂರು ಹುಡುಗರು ಹೆದರಿದರು. ನಾಡ ಕೋಣಗಳನ್ನು ಕಂಡು ಕಾಡುಕೋಣಗಳೆಂದು ನಡುಗಿದರು. ಕೆಲವರು ಸಂತೋಷಪಟ್ಟರು. ಬಾಣೆಯಿಂದ ನೀರಿಗೆ ಇಳಿದು ಗದ್ದೆಯೇರಿ ಮುಂದೆ ನಡೆದೆವು.

ತಲೆಯೆತ್ತಿ ನೋಡಿದರೆ ಆಕಾಶದೆತ್ತರದಲ್ಲಿ ಭೀಕರವಾದ ಕಲ್ಲು ಬಂಡೆಯೊಂದು ಬೆಟ್ಟದ ಸಾಲಿನಿಂದ ಹೊರಕ್ಕೆ ಚಾಚಿ ನಿಂತಿದೆ. ಅಂತ್ಯ ಅನಂತದೆಡೆಗೆ ಕೈಚಾಚಿ ನಿಂತಂತಿದೆ ಕುದುರೆಮುಖದ ಹೆಬ್ಬಂಡೆ. ಆಕಾಶದ ತೆಳು ನೀಲಿಯನ್ನು ಗಾಸಿಗೊಳಿಸಿದ ಕಗ್ಗಲೆಯಂತಿದೆ. ನೋಡ ನೋಡುತ್ತಿದ್ದಂತೆಯೇ ಅದು ಗಿರಗಿರನೆ ತಿರುಗಿ ನಮ್ಮ ಮೇಲೆ ಬೀಳುವುದೋ ಎಂಬ ಭಾವ ಮೂಡಿಸುತ್ತಿತ್ತು. ಇನ್ನೊಂದು ಗಳಿಗೆ ಅದರ ಪ್ರಬಲಾಕರ್ಷಣೆಯಿಂದ, ನಾವು ಹತ್ತಿ ರೇಕುಗಳಿಗಿಂತ ಹಗುರ ಕ್ಷುದ್ರರಾದವರು, ಅಲ್ಲಿಗೆ ನೇರ ಹಾರಿ ಸೇರಲಾರೆವೇ ಎನ್ನಿಸುತ್ತಿತ್ತು. ಎಷ್ಟು ಹತ್ತಿರ ಅಷ್ಟು ಎತ್ತರ! ತದ್ದೂರೇ ತದ್ವಂತಿಕೇ! ನರಪಿಪೀಲಿಕೆ ಹಿಮಾಲಯದ ಔನ್ನತ್ಯ ಅಳೆಯುವುದುಂಟೇ? ಎದುರಾಗಿ ನಿಂತಾಗ ನಮ್ಮ ಎಡಗಡೆಗೆ ಕುದುರೆಮುಖದ ಹೆಬ್ಬಂಡೆ ಚಾಚಿದೆ. ಅಲ್ಲಿಂದ ಹಿಂದೆ, ಅಂದರೆ ಬಲಗಡೆಗೆ ಆ ಪರ್ವತ ಸಾಲು ಕ್ರಮೇಣ ಇಳಿದಿಳಿದು ಹೋಗಿರುವುದು. ಬಂಡೆಯಿಂದ ಕೆಳಗೆ ಭೀಕರ ಪ್ರಪಾತ. ಅಲ್ಲಿಗಾಗಿ ಏರುವಂತಿಲ್ಲ. ಬಹುಶಃ ಕಂಬಳೀಹುಳು ಕ್ರಮದಿಂದ ಸಾಧ್ಯವಾದೀತು. ಹತ್ತಿರ ಹೋಗಿ ನೋಡಿ ಹೇಳಬೇಕಷ್ಟೆ. ಕುದುರೆಮುಖ ಶ್ರೇಣಿಯ ಹಿಂಬದಿಯ ಅಥವಾ ನಮಗೆ ಕಾಣದ ಆಚೆ ಬದಿಯ ಇಳಿಜಾರಿನ ತಪ್ಪಲಲ್ಲಿ ದಟ್ಟಡವಿ ಬೆಳೆದು ನಿಂತಿದೆ. ಆ ಸಹಸ್ರಾರು ಮರಗಳ ಎತ್ತರದ ಕೊಂಬೆ ರೆಂಬೆಗಳು ಒಂದಕ್ಕೊಂದು ಹೆಣೆದುಕೊಂಡಿದ್ದಂತೆ ಆ ಕಡೆಯಿಂದ ಚಾಚಿಕೊಂಡಿದ್ದುದು ಕಾಣುತ್ತಿತ್ತು. ಈ ಹಸುರಿನ ಗುಚ್ಛ ಶಿಖರದಿಂದ ಬಲಕ್ಕೆ ಶ್ರೇಣಿಯ ಗಡಿರೇಖೆಯ ಉದ್ದಕ್ಕೂ ತೊಡಿಸಿದ ಆಭರಣದಂತೆ ಇತ್ತು. ಬಂಡೆಯೇ ಕುದುರೆಯ ಮುಖ. ಅದರ ಹಿಂದಿನ ಪರ್ವತರೇಖೆ ಅದರ ಕುತ್ತಿಗೆಯ ಇಳಿಜಾರು. ಇದರ ಮೇಲೆ ಚಾಚಿದ್ದ ಹಸುರಿನ ಗುಚ್ಛಪರಂಪರೆ ಕುದುರೆ ಕತ್ತಿನ ಮೇಲಿನ ಅಯಾಲನ್ನು ನೆನಪಿಗೆ ತರುತ್ತಿತ್ತು. ಈ ಕುದುರೆಮುಖಕ್ಕೆ ಕಡಿವಾಣ ಹಾಕಲು ಸಾಧ್ಯವೇ? ಅದರ ಬೆನ್ನ ಮೇಲೇರಿ ಸವಾರಿ ಮಾಡಲು ಸಾಧ್ಯವೇ? ಯಾರು? ಪರ್ವತವನ್ನೇರುವುದು ಅದು ಅಲಿರುವುದರಿಂದ ಎಂಬ ಮಾತಿನ ಸಂಪೂರ್ಣಾರ್ಥ ನಮಗಲ್ಲಿ ಆಯಿತು.

ಕುದುರೆಮುಖ ನಮ್ಮನ್ನು ಬಾ ಬಾ ಎಂದು ಕರೆಯುತ್ತಿತ್ತು. ನಾವು ತನ್ಮಯತೆಯಿಂದ ತೇಲುತ್ತಿದ್ದೆವು ಅದರೆಡೆಗೆ. ಆಗಲೇ 'ಕಾಲಿಟ್ಟನು ಗೊಸರಿಗೆ ಕೃಷ್ಣಪ್ಪ!' "ಆಕಾಶದಲ್ಲಿ ದೃಷ್ಟಿಯಿರಲಿ, ಮೋಡಗಳ ಮೇಲೆ ಸಂಚರಿಸುತ್ತಿರು, ಆದರೆ ನೆಲವನ್ನು ಮರೆಯಬೇಡ" ಎಂದು ಅವನಿಗೂ (ಇತರರಿಗೂ) ಬುದ್ಧಿವಾದ ಹೇಳಿದರು ಕವಿ ಶಿವಪ್ಪ. ಪಾಪ, ದೊಡ್ಡಜೀವ ಕೃಷ್ಣಪ್ಪ. ಅವನನ್ನು ಜವುಗು ನೆಲದಿಂದ ಹೊರಗೆಳೆದಾಗ ಅವನ ಶೂ ಅಲ್ಲಿಯೇ ಸಮಾಧಿಯಾಗಿತ್ತು!

"ಅಲ್ಲಿ ಮಲ್ಲಿಗೆಯ ವನದಲ್ಲಿ, ಮಾಂದಳಿರ ನೆಲೆಯಲ್ಲಿ, ಕಿತ್ತಳೆಯ ಬುಡದಲ್ಲಿ, ಕುದುರೆಮುಖದ ತಳದಲ್ಲಿ" ಇದ್ದ ಬಂಗ್ಲೆ (ಹಂಚು ಹೊದಿಸಿದ ಮನೆಯೇ ಬಂಗ್ಲೆ ಎಂಬುದನ್ನು ನೆನಪಿನಲ್ಲಿಡಬೇಕು) ಮಿಸ್ಟರ್ ಸೈಮನ್ ಲೋಬೋ ಪ್ರಭು ಉರುಫ್ ಸಿಂಹ ಪುರ್ಬುಗಳದು. ಕುದುರೆಮುಖದ ಹುಲಿ ಮೆಂಗಿಲ ಶೇಣವ. ಈ ಸಿಂಹ ಹೇಗಿರಬಹುದೋ ಎಂದು ಹುಡುಗರು ವಿಸ್ಮಯಾತುರಗಳಿಂದ ನೋಡುತ್ತಿದ್ದರು.

ಬಂಗ್ಲೆಯ ಕ್ರಮ ಅನಿರೀಕ್ಷಿತ. ಅದೊಂದು ಹಳೆಯ ಮನೆ, ಹಂಚು ಹಾಕಿದ್ದೇನೋ ಹೌದು. ಅದರ ಮುಂಭಾಗದಲ್ಲಿ ಸೆಗಣಿ ಸಾರಿಸಿ ಚೊಕ್ಕಟವಾಗಿದ್ದ ವಿಶಾಲ ಅಂಗಳದಲ್ಲಿ ನಾವು ಹರಡಿ ಕುಳಿತೆವು. ಭಾರಗಳನ್ನು ಕಳಚಿದೆವು. ಬದಿಯ ಹುಲ್ಲುಮುಂಡಕ್ಕೆ ಒರಗಿ ಹಾಸಿಗೆ ಮಾಡಿಕೊಂಡವರು ಅನೇಕರು. ಸಿಗರೇಟು ಸೇದಲೇ ಬೇಕಾದವರು ಹುಲ್ಲುಮುಂಡದಾಚೆಗೆ ಮರೆಯಾದದ್ದು ಗೊತ್ತಾಯಿತು.

"ಸ್ವಲ್ಪ ದೂರ ಹೋಗಿ. ಹುಲ್ಲಿಗೆ ಬೆಂಕಿ ಹಿಡಿದುಬಿಟ್ಟೀತು ಜಾಗ್ರತೆ" ಎಂದು ಜಾಗರೂಕತೆಯ ನುಡಿ ಹೇಳುವುದೊಂದೇ ಉಳಿದಿದ್ದ ಹಾದಿ. ಹಲವಾರು ಪುಟ್ಟ ಮಕ್ಕಳು, ಎಲ್ಲರೂ ಲಂಗೋಟಿಧಾರಿಗಳು, ಮುದ್ದುಮುದ್ದಾಗಿ ಆರೋಗ್ಯಕರವಾಗಿ ಬೆಳೆದಂಥವರು ನಮ್ಮೆದುರಿನಲ್ಲಿ ನಿಂತು ಬೆರಗಾಗಿ ನೋಡುತ್ತಿದ್ದರು. ಅಷ್ಟರಲ್ಲಿ ಸಾಕ್ಷಾತ್  ಸಿಂಹ ಪುರ್ಬುಗಳು ಪ್ರತ್ಯಕ್ಷರಾದರು. ಹುಡುಗರ ನಿರೀಕ್ಷೆಯ ಹಿಮಾಲಯ ಗೋಪುರ ಶಾಂತ ಸಾಗರದ ತಳ ಸೇರಿತು! ೬೦ಕ್ಕೆ ಕಡಿಮೆ ಪ್ರಾಯವಲ್ಲದ ದೃಢಕಾಯದ ಬೇಸಾಯಗಾರ, ಕೋಮಣ(ಕೌಪೀನ)ಧಾರಿ. ತಲೆಯ ಮೇಲೆ ಮುಟ್ಟಾಳೆ.
"ನಮಸ್ಕಾರ ಸ್ವಾಮಿ" ಎಂದು ನಮ್ಮನ್ನು ಸ್ವಾಗತಿಸಿದ. ಅವನ ಕೈಯಲ್ಲಿ ಒಂದು ವರ್ಷ ಪ್ರಾಯದ ಕೈಗೂಸು ನಲಿಯುತ್ತಿತ್ತು. ಶೇಣವ ಹಿಂದಿನಿಂದ ಪುರ್ಬುವಿನ ವಂಶವೃಕ್ಷ ವಿವರಿಸಿದ – ಪುರ್ಬುವಿನ ಪ್ರಾಯ ೬೩. ಈಗ ಇರುವುದು ನಾಲ್ಕನೆಯ ಹೆಂಡತಿ, ಪ್ರಾಯ ೩೬. ಅವನಿಗೆ ಹುಟ್ಟಿದ ಮಕ್ಕಳ ಒಟ್ಟು ಸಂಖ್ಯೆ ೪೦. ಬದುಕಿ ಉಳಿದವರು ೨೮. ದೊಡ್ಡವರೆಲ್ಲರೂ ಕೆಲಸದ ಮೇಲೆ, ಮದುವೆಯಾಗಿ ಎಲ್ಲೆಲ್ಲಿಯೋ ಹೋಗಿದ್ದಾರೆ. ಮನೆಯಲ್ಲಿರುವವರು ಈಗಿನ ಹೆಂಡತಿ ಮತ್ತು ಆಕೆಯ ಎಂಟು ಮಕ್ಕಳು, ಎಂದು ಮುಂತಾಗಿ. "ಏನು ಮಾಡುವುದು ಸ್ವಾಮೀ! ಈ ಮಲೆನಾಡಿನಲ್ಲಿ  ಹೆಣ್ಣುಗಳಿಗೂ ದನಗಳಿಗೂ ಬರಕತ್ತೇ ಇಲ್ಲ" ಎಂದು ಇನ್ನೊಂದು ನುಡಿಮುತ್ತು ಉದುರಿಸಿದ ಶೇಣವ.

ಪುರ್ಬು ನನಗೆ ಹಳೆಯ ಪರಿಚಿತ. ನಾನು ಹತ್ತು ವರ್ಷಗಳ ಹಿಂದಿನ ಘಟನೆಯನ್ನು ಅವನ ನೆನಪಿಗೆ ತಂದೆ. ಆಗ ಅವನೂ ನಮ್ಮೊಡನೆ ಶಿಖರಕ್ಕೆ ಬಂದಿದ್ದ. ನಮ್ಮ ಜೊತೆ ಬಂದಿದ್ದ ಸೈನ್ಯದ ಅಧಿಕಾರಿ ಕ್ಯಾಪ್ಟನ್ ದೊರೈರಾಜರೂ ಶೇಣವನೂ ಪುರ್ಬುವೂ ಮುಂದೆ ಮುಂದೆ ನಡೆದಿದ್ದರು ಬೇಟೆಯ ಆಸೆಯಿಂದ. ಕುದುರೆಮುಖದ ಬೆನ್ನನ್ನು ತಲಪಿದಾಗ, ಆ ತಿರುಗಾಸನ್ನು ಥಕ್ಕನೆ ತಿರುಗಿ ಆಚೆ ಮಗ್ಗುಲಿನ ವೈಶಾಲ್ಯವನ್ನು ಕಂಡಾಗ ಅಲ್ಲಿಯ ಹುಲ್ಲಿನ ಹೊದಿಕೆಯ ವಿಸ್ತಾರದಲ್ಲಿ ಸ್ವಚ್ಛಂದವಾಗಿ ಮೇಯುತ್ತಿದ್ದ ಕಾಟಿಗಳ ಹಿಂಡನ್ನು ನೋಡಿದೆವು. ನಮ್ಮನ್ನು ಅವರು ಅಲ್ಲಿಯೇ ಕುಳಿತಿರಲು ಸಂಜ್ಞೆ ಮೂಲಕ ವಿಧಿಸಿ ಕಾಟಿ ಹಿಂಡಿಗೆ ಕಾಣದಂತೆ ಬಳಸು ದಾರಿಯಿಂದ ಕಾಡು ಸೇರಿದರು. ಹಿಂದೆ ಹೇಳಿದ ಅಯಾಲಿನ ಕಾಡದು. ಕಾಡಿನಿಂದ ಹೊರಗೆ ದಾಟಿ ಕಾಟಿಗಳ ಹಿಂಡು ಮೇಯುತ್ತಿದ್ದ ಇಳಿಜಾರಿನ ತುತ್ತ ತುದಿ ತಲಪಿದರು. ಆ ಗಡಿಗೆರೆಯನ್ನು ತೆವಳಿ ಹರಿದು ದಾಟಿ ಒಂದು ಅನುಕೂಲ ಪ್ರದೇಶಕ್ಕೆ ಬಂದರು. ನಮಗೆ ಕುಳಿತಲ್ಲಿಂದಲೇ ಅವರ ತೆವಳು ಸರಿತ ಮತ್ತು ಕಾಟಿಗಳ ಸ್ವಚ್ಛಂದ ವಿಹಾರ ಎರಡೂ ತೋರುತ್ತಿದ್ದುವು. ಶಿಸ್ತಿನ ಬಿಗಿಯಿಲ್ಲದಿದ್ದರೆ ಆ ಗಳಿಗೆಯಲ್ಲಿ ಏನಾದರೂ ಸದ್ದು ಮಾಡಿ ಕಿರುಚಿ ಕಾಟಿಗಳನ್ನು ಓಡಿಸಿ ಬಿಡುತ್ತಿದ್ದೆ. ಆದರೆ ಬಂದವರು ಮೇಲಧಿಕಾರಿ. ಮುಂದಿನ ವಿಷ ಗಳಿಗೆಯಲ್ಲಿ ರೈಫಲ್ ಹೊಟ್ಟಿತು. ಹಿಂಡು ದಿಕ್ಕಾಪಾಲಾಗಿ ಕಂಗಾಲಾಗಿ ಚದರಿ ಹೋಯಿತು. ಇಲ್ಲ, ಕುದುರೆಮುಖದ ಶಿಖರ ಕಳಚಿ ಬಿದ್ದಂತೆ ಒಂದು ಭಾರೀ ಕಾಟಿ ಉರುಳಿ ಬಿದ್ದು ವಿಲವಿಲನೆ ಒದ್ದಾಡಿ ರಕ್ತದ ಕಾರಂಜಿ ಹಾರಿಸಿ ನಿಶ್ಚೇಷ್ಟಿತವಾಯಿತು. ಮತ್ತೊಂದು ಗುಂಡಿನ ಸದ್ದೂ ಕೇಳಿಸಿತು. ಬಹುಶಃ ಭದ್ರತೆಗಾಗಿ ಸತ್ತ ಕಾಟಿಗೇ ಪುನಃ ಹೊಡೆದುದಾಗಿರಬೇಕು. ನಾನಲ್ಲಿಗೆ ಹೋಗಲೇ ಇಲ್ಲ – ಅಂಥ ದೃಶ್ಯ ನೋಡುವುದು ನನಗೆ ಸಾಧ್ಯವಿಲ್ಲ. ಹುಡುಗರು ಓಡಿದರು. ನಮ್ಮ ಇಪ್ಪತ್ತು ಹುಡುಗರಿಗೆ ಆ ಪರ್ವತ ದೇಹವನ್ನು ಒಂದು ಮಗ್ಗುಲಿನಿಂದ ಇನ್ನೊಂದು ಮಗ್ಗುಲಿಗೆ ಮಗುಚುವುದು ಅತಿ ಪ್ರಯಾಸಕರವಾಯಿತಂತೆ. ಅದನ್ನು ಸುಲಿದು ಚರ್ಮ ಮಾಂಸಗಳನ್ನು ಪುರ್ಬು, ಶೇಣವ ಇವರ ಸಂಬಂಧಿಕರು ಒಯ್ದರು. ಕೋಡನ್ನು ಕ್ಯಾಪ್ಟನ್ನರು ತೆಗೆದುಕೊಂಡರು. ಈ ದುರ್ಘಟನೆಯನ್ನು ಬರೆಯುವಾಗ ಇಂದಿಗೂ ನನ್ನ ಲೇಖನಿ ಕುಂಟುತ್ತದೆ; ಹೃದಯವಿಕಾರವಾಗುತ್ತದೆ. ಕಾನೂನು, ನ್ಯಾಯ, ನೀತಿ ಯಾವ ದೃಷ್ಟಿಯಿಂದ ನೋಡಿದರೂ ನಾವು ಮಾಡಿದ್ದು ಘೋರ ಪಾಪ. ಭೂಮಿಯ ಮೇಲೆ ವಾಸವಾಗಿರಲು ಮನುಷ್ಯನಿಗಿರುವಷ್ಟೇ ಹಕ್ಕು ಆ ಪ್ರಾಣಿಗೂ ಇದೆ. ಅದು ನಮ್ಮ ಮೇಲೆ (ಆತ್ಮರಕ್ಷಣೆಗಾಗಿ ಮಾತ್ರ) ಏರಿ ಬಂದಿದ್ದರೆ, ಬರ್ನಾರ್ಡ್ ಶಾ ಎಂದಿರುವಂತೆ, ಅದನ್ನು ಭೀಕರ ಕ್ರೌರ್ಯ ಎನ್ನುತ್ತಿದ್ದೆವು. ಆದರೆ ನಾವದನ್ನು ಹೊಡೆದದ್ದು ಬೇಟೆ, ಆಟ, ವಿನೋದ – ತೋಳ ಕುರಿಮರಿ ನ್ಯಾಯ.

ಪುರ್ಬು ಘಟನೆಯನ್ನು ಚೆನ್ನಾಗಿ ತಿಳಿದಿದ್ದ, ಅಲ್ಲದೇ ತಿಂದಿದ್ದನಷ್ಟೆ! "ಸ್ವಾಮೀ! ಮತ್ತೆ ಯಾರೂ ಬರಲಿಲ್ಲ ಆ ರೀತಿ. ಈ ಸಲ ರೈಫಲ್ ಮಿನಿ ತಂದಿದ್ದೀರಾ?" ಆಸೆಯ ಪ್ರಶ್ನೆ.
"ತಂದಿದ್ದೇವೆ. ಆದರೆ ರಕ್ಷಣೆಗಾಗಿ ಮಾತ್ರ. ಬೇಟೆ ಖಂಡಿತ ಆಡುವುದಿಲ್ಲ."
"ನನಗೂ ಬರಲು ಸಾಧ್ಯವಿಲ್ಲ ಸ್ವಾಮೀ. ಈಗ ಮುದುಕನಾದೆ. ಆಗಾದರೆ ಆರೋಗ್ಯ ಚೆನ್ನಾಗಿತ್ತು. ಕಳೆದ ವರ್ಷ ಮಳೆಗಾಲದಲ್ಲಿ ನಾನು ಬದುಕಿ ಉಳಿದದ್ದೇ ಹೆಚ್ಚು. ನೀವು ಬಂದಾಗ ದಾರಿಯಲ್ಲಿ ಒಂದು ಎಚ್ಚರಿಕೆಯ ಮಾತು ಬರೆದಿದ್ದ ಬಂಡೆಯನ್ನು ನೋಡಿದಿರಷ್ಟೆ. ಅಲ್ಲಿ ನಾನು ಒಬ್ಬನೇ ಬರುತ್ತಿದ್ದಾಗ ಒಂದು ಕಾಡುಕೋಣ ಥಕ್ಕನೆ ನನ್ನ ಮೇಲೆಯೇ ಏರಿ ಬರಬೇಕೇ? ನಾನು ಕೋವಿ ಹಿಡಿದಿರಲಿಲ್ಲ. ಅಲ್ಲದೇ ಅಷ್ಟು ಹತ್ತಿರದಿಂದ ಏನೂ ಮಾಡುವಂತಿರಲಿಲ್ಲ. ಏನೋ ನಿಮ್ಮನ್ನು ನೋಡಬೇಕೆಂದು ದೇವರು ಬರೆದಿದ್ದ. ಅಲ್ಲಿಯೇ ಕೂತು ಹೋದೆ.

ಅದು ನನ್ನ ಮೇಳೆ ನುಗ್ಗಿ ಕೊಂಬಿನಿಂದೆತ್ತಿ ಹಳ್ಳಕ್ಕೆ ಎಸೆದುಬಿಟ್ಟಿತು. ಆದರೆ ನಾನು ಬೀಳುವಲ್ಲಿ ಹುಲ್ಲಿನ ರಾಶಿ, ಕೆಸರು, ಎಲೆ ಇದ್ದುದರಿಂದ ಮೂಳೆ ಮುರಿಯದೇ ಉಳಿದುಕೊಂಡೆ. ಬಹಳ ಕಷ್ಟ ಸ್ವಾಮೀ."
ಆದರೆ ನನ್ನ ಮನಸ್ಸು ಬೇರೆಯೇ ಮಿಡಿಯುತ್ತಿತ್ತು. "ಹೌದು ಆ ನಿರಪರಾಧಿಯ ಎಷ್ಟೊಂದು ಬಂಧು ಬಳಗದವರನ್ನು ನೀನು ಅಮಾನುಷವಾಗಿ ಕೊಂದು ತಿನ್ನಲಿಲ್ಲ? ಅದು ನಿನ್ನ ಮೇಲೆ ಸೇಡು ತೀರಿಸಲೆಂದೇ ನುಗ್ಗಿರಬೇಕು. ಆದರೂ ನಿನ್ನಷ್ಟು ಕ್ರೂರಿ ಅದಲ್ಲ, ಜೀವಸಹಿತ ಬಿಟ್ಟಿತಲ್ಲ."

ನಾವು ಕೆಳಗಿನಿಂದಲೇ ತಂದಿದ್ದ ಚಿತ್ರಾನ್ನ, ಸಿಹಿ ತಿಂಡಿ, ಷರಬತ್ತು, ಹಣ್ಣು ಎಲ್ಲವನ್ನೂ ಆ ಸುಂದರ ವಾತಾವರಣದಲ್ಲಿ ಕಬಳಿಸಿದೆವು. ಇದೇ ನಮ್ಮ ಮಧ್ಯಾಹ್ನದ ಊಟ. ಬಂಗ್ಲೆಯೊಳಗೆ ಹೋಗಿ ನಲ್ಲಿ ನೀರು ಹಿಡಿದು ತಂದ ತಿಮ್ಮಪ್ಪ ಹೇಳಿದ, "ಸರ್ ಇಲ್ಲಿ ಪೈಪ್ ವಾಟರ್ ಸಪ್ಲೈ ಉಂಟು!"
"ಹೌದೌದು! ಮಂಗಳೂರಿನ ನೀರು ಸಪ್ಲೈ ಕಂಪೆನಿ ಇಲ್ಲಿವರೆಗೆ ಪೈಪು ಹಾಕಿದೆ" ಮೆಂಗಿಲ ಶೇಣವನ ತಟಕ್ಕನೆ ಉತ್ತರ. ತಿಮ್ಮಪ್ಪ ನಂಬಿದ. ಮುಂದೆ ಬೆಟ್ಟ ಏರುವಾಗಲೇ ತಿಳಿದದ್ದು; ಬೆಟ್ಟದ ಝರಿಗೆ ಪುರ್ಬು ನಳಿಗೆ ಜೋಡಿಸಿದ್ದ ಅಷ್ಟೆ.

ಊಟ ಮುಗಿದ ಮೇಲೆ ಜೊಂಪು ಹಿಡಿವ ಮೊದಲೇ ಅಲ್ಲಿಂದ ಮುಂದಕ್ಕೆ ಹೊರಟೆವು. ಪಿಂಟೋ, ಜಯರಾಮ, ರಾಮಕೃಷ್ಣ ಮೊದಲಾದವರು ಅಲ್ಲಿಯೇ ಶಿಬಿರ ಸ್ಥಾಪಿಸಿ ಮರುದಿನ ಬೆಳಗ್ಗೆ ಲಗ್ಗೆ ಹತ್ತಿದರಾಗದೇ ಎಂದು ಸೂಚಿಸಿದರು. ಸೂಚನೆಯ ಹಿನ್ನೆಲೆಯಲ್ಲಿದ್ದ ಧ್ವನಿ ಅವರಿಗೆ ವಿಶ್ರಾಂತಿ ಬೇಕೆಂಬುದು. ನಾನೆಂದೆ, "ನಮಗಿರುವ ಅವಧಿಯಲ್ಲಿ ಇಂದೇ ಅಲ್ಲಿಗೆ ಹೋಗಬೇಕು. ಹೋದಮೇಲೆ ನೀವು ಒಪ್ಪುತ್ತೀರಿ, ಈ ನಿರ್ಧಾರ ಸರಿಯಾದದ್ದು ಎಂದು."

ಎರಡು ಗಂಟೆಗೆ ಸಿಂಹ ಪುರ್ಬು ಮನೆಯಿಂದ ಗೂಟ ಕಿತ್ತೆವು. ಮುಂದಿನ ದಾರಿಯ ದೂರ ೫ ಮೈಲು, ಹತ್ತಬೇಕಾದ ಎತ್ತರ ಸುಮಾರು ೩೦೦೦ ಅಡಿ. ಕುದುರೆಮುಖ ಹತ್ತಿರ ಕಂಡರೂ ಎರಡು ಬೆಟ್ಟ ಏರಿ ಇಳಿದು ಅಲ್ಲಿಗೆ ಹೋಗಬೇಕು. ಕುದುರೆಮುಖದ ಔನ್ನತ್ಯದ ಮುಂದೆ ಅವು ಕಲ್ಲುರಾಶಿಗಳು. ಆದರೆ ನಮಗೆ ಅವೇ ದಿಗ್ಬಂಧನ. ಏರಿಕೆ ಅತಿ ದುರ್ಗಮವಾಯಿತು. ಸಾವನದುರ್ಗಕ್ಕೆ ಸಮಾನವಾದಂತೆ ಅನ್ನಿಸಿತು. ಆದರೆ ಇದು ನಡು ಹಗಲ ಕೆಂಡ ಬಂಡೆಯಲ್ಲ. ಜೊಂಡು, ಮರಳು, ಕಲ್ಲಿನ ಹರಳು ಕೂಡಿದ್ದ ರಾಶಿ. ಹೀಗಾಗಿ ಜಾರುವ ಬೀಳುವ ಭಯ ಇರಲಿಲ್ಲ. ಅದುವರೆಗೆ, "ಏರುವೆಯಾ ನಮ್ಮೆತ್ತರಕ್ಕೆ? ನಾವೇ ಎತ್ತರ" ಎಂದು ಮೆರೆಯುತ್ತಿದ್ದ ದಿಗ್ಭಿತ್ತಿಗಳು ಕ್ರಮೇಣ ಕಾಲ ಕೆಳಗೆ ಕುಸಿಯುತ್ತಿದ್ದುವು. ನಮ್ಮ ಶ್ರಮ ಸಾಹಸಗಳ ಮುಂದೆ ಅವು ಮಣಿಯುತ್ತಿದ್ದುವು. ಮೊದಲು ಅವುಗಳಿಗೆ ಹೆದರಿ ಮೇಲೆ ನೋಡುತ್ತಿದ್ದ ನಮಗೆ ಈಗ ಆತ್ಮ ವಿಶ್ವಾಸದಿಂದ, ನವಸಾಧನೆಯಿಂದ ಕೆಳಗೆ ನೋಡುವ ಧೈರ್ಯ ಬಂದಿತು. ದೂರದಿಂದ ಭೀಕರ; ಹತ್ತಿರದಿಂದ ಪ್ರಿಯಕರ. ಏರುತ್ತಿದ್ದಂತೆ ಬೆಟ್ಟದ ಮೈಯಲ್ಲಿಯೇ ಲೀನರಾದ ನಮಗೆ ಮೂಗಿಗಿಂತ ಮುಂದೆ ಕಾಣುವುದೇ ಇಲ್ಲ. ಹಿಂದೆ ಮಾತ್ರ ನೋಡಬಾರದು. ನಡೆ ಮುಂದೆ. ಶಿಖರದಿಂದ ಎತ್ತರವಾದ ಶಿಖರಕ್ಕೆ ಸಾಗಿದಾಗ ವಿಶ್ವಸಾಕ್ಷಾತ್ಕಾರ. ಇದು ಪರ್ವತದ ಸೂತ್ರ.

ಕುದುರೆಮುಖ ಆಕಾಶಕ್ಕೆ ಮಸಿ ಮೆತ್ತಿದ ಭಯಂಕರತೆ ಪಡೆಯಿತು. ನೇರವಾಗಿ ಅದನ್ನು ಲಗ್ಗೆ ಹತ್ತುವುದು ಸಾಧ್ಯ ಹಗ್ಗಗಳ ಸಹಾಯದಿಂದ. ಆದರೆ ನಮ್ಮ ಆಗಿನ ಪರಿಸ್ಥಿತಿಯಲ್ಲಿ ಅಲ್ಲ. ಅದಕ್ಕೆ ಬೇರೆಯೇ ಕಾಯಕ್ರಮ ರೂಪಿಸಿ ಪುರ್ಬು ಮನೆಯಲ್ಲಿ (ಪಿಂಟೋ ಸೂಚಿಸಿದಂತೆ) ತಂಗಬೇಕು. ಅಲ್ಲಿಂದ ಅರುಣೋದಯದಲ್ಲಿ ಹೊರಡಬೇಕು.

ನಮ್ಮ ಶಿಸ್ತಿನ ಪರಿಪಾಲನೆ ಆ ಹಿರಿತನದ ಸಾಮೀಪ್ಯದಲ್ಲಿ ಕಷ್ಟಕರವಾಯಿತು. ಯಾರೂ ಲೈನನ್ನು ಮುರಿದು ಹೋಗಬಾರದು. ಅಡ್ಡದಾರಿ ಹಿಡಿಯಬಾರದು ಎಂದು ಕಟ್ಟಾಜ್ಞೆ ವಿಧಿಸಿದ್ದರೂ ಕುದುರೆಮುಖ ಸಮೀಪವಾದಂತೆ ಹುಡುಗರ ಉತ್ಸಾಹ ಮೇರೆ ಮೀರಿತು. ವೈಯಕ್ತಿಕ ಹಿರಿಮೆ ಸಾಧಿಸುವ ಅಪೇಕ್ಷೆ ಹೆಚ್ಚಾಯಿತು. ನಾನು ಸ್ವಲ್ಪ ಸಡಿಲಗೊಳಿಸಿದೆ – ಸಾಹಸಪ್ರಿಯರು ಮುಂದೆ ಹೋದರೆ ಹೋಗಲಿ, ಆ ದಾರಿಯಲ್ಲಿ ಹೇಗೂ ಅಪಾಯವೇನೂ ಇಲ್ಲ ಎಂಬ ಧೈರ್ಯದಿಂದ. ತರುಣರಿಗೆ ಈಗ ಮುದುಕ ಮೆಂಗಿಲ ಶೇಣವ ಬಳಸು ದಾರಿಯಲ್ಲಿ ಹೋಗುತ್ತಿದ್ದಾನೆ ಎಂದೆನ್ನಿಸಿತು. ನಿಜ ಸ್ಥಿತಿಯೂ ಹಾಗೆಯೇ. ಕುದುರೆಮುಖದ ಶ್ರೇಣಿಗೆ ಬಂದ ಮೇಲೆ (ಅದು ಎಡಗಡೆಗೆ ಚಾಚಿದೆ) ಬಲಗಡೆಗಾಗಿ (ಅಂದರೆ ಬಂಡೆಯಿಂದ ದೂರ ದೂರ) ಏರುತ್ತ ಹೋಗಿ ಸ್ವಲ್ಪ ಬಳಸಾದರೂ ಕಠಿಣವಲ್ಲ. ಆದರೆ ನಮ್ಮ ಧೀರರಿಗೆ ಎಡಗಡೆಯ ಹತ್ತಿರದ ಎತ್ತರದ ಬಂಡೆ ಹೆಚ್ಚು ಆಕರ್ಷಣೀಯವಾಯಿತು. ಅಜ್ಜ ಬಳಲಿದ್ದಾನೆ. ಭಾರ ಹೊತ್ತಿದ್ದಾನೆ, ತ್ರಾಣವಿಲ್ಲ. ಹೋದರೆ ಹೋಗಲಿ ನಾವು ಸೀದಾ ಹೋಗುತ್ತೇವೆಂದು ಹೊರಟರು ಕೆಲವರು.

# ಗುಂಡಿಗೆ ಬಿದ್ದರು ಶೇಷಯ್ಯ

**ಅಧ್ಯಾಯ ಇಪ್ಪತ್ಮೂರು**

ಕಡಿದಾದ ಬೆಟ್ಟಗಳ ನಡುವೆ ಈ ಸೀದಾ ಮಾರ್ಗಗಮನ ಎನ್ನುವುದೊಂದು ಬಿಸಿಲ್ಗುದುರೆ. ಬೆಟ್ಟದ ಮೈಯಲ್ಲಿ ಬಳಸಿ ನಡೆದು ಒಂದು ಮಗ್ಗುಲಿನಿಂದ ಇನ್ನೊಂದು ಮಗ್ಗುಲಿಗೆ ತಗ್ಗಾಗಿರುವಲ್ಲಿ ದಾಟಬೇಕೇ ವಿನಾ ಶಿಖರದಿಂದ ಶಿಖರಕ್ಕೆ ಜಿಗಿಯುವುದಲ್ಲ. ಹೀಗೆ ಶಿಖರಾಭಿಮುಖವಾಗಿಯೇ ಹೋಗುವಾತ ಬೆಟ್ಟವೇರಿ ಕಣಿವೆಯಿಳಿದು ದಾರಿ ತಪ್ಪಿ ಕಷ್ಟಪಟ್ಟು ಗುರಿ ತಲಪುವಾಗ (ತಲಪಿದರೆ) ಬಳಸು ದಾರಿಯವನಿಗಿಂತ ಹೆಚ್ಚು ಶ್ರಮ ಪಟ್ಟಿರುತ್ತಾನೆ, ಕಾಲಹರಣ ಮಾಡಿರುತ್ತಾನೆ, ಅಪಾಯ ಎದುರಿಸಿರುತ್ತಾನೆ. ಕಣಿವೆಯ ತಳದಲ್ಲಿ ನೀರಿನ ಆಸರೆಯಿರುವುದು. ಅಲ್ಲಿಗೆ ಕಾಡು ಪ್ರಾಣಿಗಳು ಖಂಡಿತ ಬರುತ್ತವೆ. ಹಾವುಗಳ ಭಯವೂ ಇದೆ. ಇಷ್ಟಾಗುವಾಗ ಸಾಯಂಕಾಲವೂ ಸಮೀಪಿಸಿದರೆ ಅವನ ಕುಂಭ ಪೂರ್ಣವಾದಂತೆಯೇ.

ಇಲ್ಲಿ ಇದಕ್ಕೊಂದು ಉದಾಹರಣೆ ಬರೆಯುವುದು ವಿಹಿತ. ಆರು ವರ್ಷಗಳ ಹಿಂದೆ, ಆಗ ನಾನು ಮಡಿಕೇರಿಯಲ್ಲಿದ್ದೆ. ಅಲ್ಲಿಂದ ರಾಜಾಸೀಟ್ ಬೆಟ್ಟದ ಸಾಲಿನ ಮೇಲೆಯೇ ನಡೆದರೆ ಸುಮಾರು ಆರು ಮೈಲು ದೂರದಲ್ಲಿ ನಿಶಾನಿಮೊಟ್ಟೆ ಎಂಬ ಸಾಕಷ್ಟು ಎತ್ತರದ ಬೆಟ್ಟದ ಕೊಡಿ ತಲಪುತ್ತೇವೆ. ಮಡಿಕೇರಿಯಿಂದ ಸುಮಾರು ೩೦೦ ಅಡಿ ಮಾತ್ರ ಎತ್ತದರದಲ್ಲಿದೆ ಅ ಶಿಖರ. ಕಾರಣ, ಮಡಿಕೇರಿಯ ಬೆಟ್ಟದ ಮೇಲಿನ ಪಟ್ಟಣ. ಸರಕಾರದ ವಿವಿಧ ಇಲಾಖೆಗಳಲ್ಲಿ ಹಿರಿಯ ಅಧಿಕಾರಿಗಳಾಗಿದ್ದ ಶ್ರೇಷ್ಠ, ಶೇಷಯ್ಯ, ಜ್ವಾಲಣ್ಣ ಮತ್ತು ಪ್ರಭಾಚಂದ್ರ ಇವರೂ ಕಾರ್ಪೊರೇಷನ್ ಬ್ಯಾಂಕ್ ಏಜಂಟ್ ಪುರಾಣಿಕ ಇವರೂ ನನ್ನ ಸ್ನೇಹಿತರಾಗಿದ್ದರು. ನಮ್ಮ ಎನ್‌ಸಿಸಿ ದಳದವರ ನಿಶಾನಿಮೊಟ್ಟೆ ಸಾಹಸವನ್ನು ಅವರಿಗೆ ವಿವರಿಸುತ್ತಿದ್ದೆ. "ನಾವೂ ಒಂದು ಸಲ ಹೋಗಬೇಕು" ಇದು ಅವರ ಆಸೆ. ಅವರೆಲ್ಲರೂ ೪೦ರ ತಪ್ಪು ಮಗ್ಗುಲಲ್ಲಿದ್ದವರು. ಒಬ್ಬರಿಗೆ ನಡೆಯಲು ಕಷ್ಟ, ಸ್ಥೂಲಗಾತ್ರ, ಇನ್ನೊಬ್ಬರಿಗೆ ಬೆಟ್ಟ ಏರುವುದು ಇಳಿಯುವುದು ಎರಡೂ ಪ್ರಯಾಸವೇ, ತ್ರಾಣವಿಲ್ಲ. ಮತ್ತೊಬ್ಬರಿಗೆ ಔನ್ನತ್ಯದ ಭಯ. ಬೆಟ್ಟದ ಮೇಲೆ ನಿಂತರೆ ಥರಥರನೆ ನಡುಗುವರು. ಶೇಷಯ್ಯ ಮಾತ್ರ ಇವಕ್ಕೆಲ್ಲ ಅಪವಾದ. ಅಷ್ಟು ಮಾತ್ರವಲ್ಲ. ಪ್ರಾಯದಲ್ಲಿ ನನಗಿಂತ ಹಿರಿಯರಾಗಿದ್ದರೂ ಅವರೊಡನೆ ಯಾವ ವಿಧವಾದ ಸ್ಪರ್ಧೆಯಲ್ಲಿಯೂ ನಾನು ಗೆಲ್ಲುತ್ತಿರಲಿಲ್ಲ. ಅವರನ್ನು ಪಾದರಸ, ವಿದ್ಯುತ್ತು ಎಂದು ಕರೆಯುತ್ತಿದ್ದೆವು. ಹೇಗೂ ಇರಲಿ, ಈ ಪಾದರಸವನ್ನೂ ಅತಿಭಾರದ ಸೀಸದ ಗಟ್ಟಿಗಳನ್ನೂ ಸ್ನೇಹದ ದಾರದಿಂದ ಪೋಣಿಸಿ ನಿಶಾನಿಮೊಟ್ಟೆಯೆಡೆಗೆ ಹೊರಟೆವು. ಸಾಧಾರಣವಾಗಿ ಮಡಿಕೇರಿಯಿಂದ ಎರಡು ಗಂಟೆಗಳ ದಾರಿ ಅದು. ಆದರೆ ಈ ಹಿರಿಯ ಕಡಿವಾಣಗಳಿಂದ ನಮಗೆ ದಾರಿ ನಾಲ್ಕು ಗಂಟೆ ತೆಗೆದುಕೊಂಡಿತು. ಇದನ್ನು ತಿಳಿದೇ ನಾವು ೧೧ ಗಂಟೆಗೆ ಮಡಿಕೇರಿಯಿಂದ ಹೊರಟಿದ್ದೆವು. ಶೇಷಯ್ಯ ಲಂಗುಲಗಾಮಿಲ್ಲದ ಕುದುರೆ. ಇನ್ನೊಬ್ಬ ಮಿತ್ರ ಪಟ್ಟು ಹಿಡಿದುನಿಂತ ಕತ್ತೆ. ಇವರ ಮಧ್ಯೆ ರಾವುತ ನಾನು. ಅಂತೂ ೩ ಗಂಟೆ ಅಪರಾಹ್ಣ ನಿಶಾನಿ ಮೊಟ್ಟೆಯ ಮೇಲೆ ಒಟ್ಟಾಗಿ ಸೇರಿದೆವು – ದಾರಿ ನನಗೆ ಮಾತ್ರ ಗೊತ್ತಿದ್ದುದರಿಂದ. ಅಲ್ಲಿಂದ ಸ್ವಲ್ಪ ಕಡಿದಾದ ಕಾಲುದಾರಿಯಲ್ಲಿ ೨೦೦೦ ಅಡಿಗಳಷ್ಟು ಆಚೆ ಮಗ್ಗುಲಿಗೆ ಇಳಿದು ತಪ್ಪಲು ಸೇರಿ ಮುಂದೆ ಸುಮಾರು ೫ ಮೈಲು ನಡೆದರೆ ಮಡಿಕೇರಿ–ಮಂಗಳೂರು ಬಸ್ ದಾರಿಯನ್ನು ಜೋಡುಪಾಲ ಎಂಬಲ್ಲಿ ತಲಪುತ್ತೇವೆ. ಅಲ್ಲಿಗೆ ಶ್ರೇಷ್ಠರ ಕಾರನ್ನು ಅವರ ಡ್ರೈವರ್ ತಂದಿರುತ್ತಾನೆ. ಅದನ್ನೇರಿ ನಾವು ಮಡಿಕೇರಿಗೆ ಮರಳುವುದು – ಇದು ಮುಂದಿನ ಯೋಜನೆ.

ನಿಶಾನಿಮೊಟ್ಟೆಯನ್ನು ಇಳಿಯಲು ತೊಡಗಿದೆವು! ದೂರದಲ್ಲಿ ಮಂಗಳೂರು ರಸ್ತೆ ಹೆಬ್ಬಾವು ಬಿದ್ದಂತೆ ಮಲಗಿದೆ. ಬಳಸುದಾರಿ ಶೇಷಯ್ಯನಿಗೆ ಇಷ್ಟವಾಗಲಿಲ್ಲ. ಪಾದರಸವನ್ನು ಕೆಣಕುವುದೇ ಶ್ರೇಷ್ಠನ ಹಿರಿಯ ಆಟ. "ಶೇಷಯ್ಯ! ಈ ಒಳದಾರಿಯನ್ನು ನೀವೇಕೆ ಶೋಧಿಸಬಾರದು?" ಅವರ ಪ್ರಶ್ನೆ.

"ಜೀಟಿ! ಮಂಗಳೂರು ದಾರಿ ಇಲ್ಲಿಯೇ, ಕಾಲಕೆಳಗೆ ಕಾಣುತ್ತಿದೆ. ಬನ್ನಿ ಷಾರ್ಟ್ ಕಟ್ ಮಾಡೋಣ" ಶೇಷಯ್ಯನೆಂದರು.

"ಬೆಟ್ಟದ ಅನುಭವ ನಿಮಗಿಲ್ಲ. ಇಲ್ಲಿ ಷಾರ್ಟ್ ಕಟ್ ಮರಣಕ್ಕೆ ಸ್ಟ್ರೇಟ್ ಕಟ್, ಅಂದರೆ ಹಾರ್ಟ್ ಫಟ್ ಆಗಬಹುದು. ಗಂಟೆಯೂ ೩ ದಾಟಿದೆ. ನನ್ನ ಹಿಂದೆಯೇ ಬನ್ನಿ!" ನಾನೆಂದೆ.

"ಜೀಟಿ ಹೇಡಿ" ಶ್ರೇಷ್ಠನ ಇನ್ನೊಂದು ಅಸ್ತ್ರ.

"ಬೇಡ ಶೇಷಯ್ಯ" ಪ್ರಭಾಚಂದ್ರ.

ಶೇಷಯ್ಯ ಸದಾ ಟಾಪ್‌ಗಿಯರ್, ಶ್ರೇಷ್ಠನ full ಚಿಛಿಛಿಜಟಜಡಿಚಿಣಾಡಿ ಜೊತೆಗೆ. ನೀವು ಬರದಿದ್ದರೆ ಬೇಡ. ನಾನು ನೋಡಿ ನಿಮಗಿಂತ ಮೊದಲು ಬಸ್ ದಾರಿ ತಲಪಿರುತ್ತೇನೆ." ಶೇಷಯ್ಯ ಧಡ ಧಡನೆ ದುಮುಕುತ್ತ ಇಳಿಯತೊಡಗಿದರು. ಈಗ ಶ್ರೇಷ್ಠನಿಗೂ ಗಾಬರಿಯಾಯಿತು.

"ಬೇಡ ಬೇಡ. ಹಿಂದೆ ಬನ್ನಿ, ಮುಂದೆಂದಾದರೂ ನೋಡೋಣ" ಎಂದು ಕೂಗಿದರು. ಎಷ್ಟು ಕೂಗಿದರೂ ಶೇಷಯ್ಯ ಹಿಂದೆ ಬಾರ, ರಾಮಬಾಣದಂತೆ.

"ನಿಮಗೇಕೆ ಇಷ್ಟು ಹೆದರಿಕೆ? ಬನ್ನಿ ನನ್ನ ಹಿಂದೆ,"ಮತ್ತೆ ಶೇಷಯ್ಯನ ಪಂಥಾಹ್ವಾನ.

"ಹೆದರಿಕೆ ಧೈರ್ಯ ಪ್ರಶ್ನೆ ಇವಲ್ಲ. ಕೂಟದ ಶಿಸ್ತಿನ ವಿಚಾರ. ನಮ್ಮ ಜೊತೆಯಲ್ಲಿರುವಾಗ ನಿಮಗೆ ಪ್ರಾಣ ಕಳೆದುಕೊಳ್ಳುವ ಅಧಿಕಾರವಿಲ್ಲ. ನೀವು ಬರುತ್ತೀರೋ ಇಲ್ಲವೋ?" ಎಂದು ತಾರಶ್ರುತಿಯಲ್ಲಿ ಅರಚಿದೆ.

ಆದರೆ ಪಾದರಸ ಓಡಲು ತೊಡಗಿದರೆ ಹಿಡಿಯಲು ಸಿಕ್ಕುವುದೇ? ಶೇಷಯ್ಯ ನಗು ನಗುತ್ತ ಇಳಿದಿಳಿದೇ ಹೋದರು. ಮುಂದಿನ ಕ್ಷಣ ನಾವೂ ಅವರೂ ಬೆಟ್ಟದ ಬೇರೆ ಬೇರೆ ಮೈಗಳಲ್ಲಿ ನಡೆಯುತ್ತಿದ್ದೆವು. ಮತ್ತೊಂದು ಹತ್ತು ಹೆಜ್ಜೆ ಮುಂದೆ ಹೋಗುವಾಗ ಅವರಿಗೂ ನಮಗೂ ಮಧ್ಯೆ ಬೆಟ್ಟದ ಉಬ್ಬು ಅಡ್ಡ ಬಂದಿತು. ಇನ್ನೊಂದು ಗಳಿಗೆ ಅವರು ನಮ್ಮ ದೃಷ್ಟಿಯಿಂದ ಮರೆಯಾದರು. ಏನು ಬಂತಪ್ಪಾ ಈ ಮಾರಾಯನಿಗೆ ಎಂದು ನಾವು ಚಿಂತೆಯಿಂದಲೇ ಮುಂದೆ ನಡೆಯುತ್ತಿದ್ದೆವು. ಅಷ್ಟರಲ್ಲಿಯೇ ಭಯಂಕರ ಚೀತ್ಕಾರ: "ನಾರಾಯಣರಾವ್, ನಾರಾ..." ಎಂದು ಬೆಟ್ಟದ ಯಾವುದೋ ಮೂಲೆಯಿಂದ ಕರ್ಕಶ ಧ್ವನಿ ತಿವಿದು ನಮ್ಮನ್ನು ಕದಡಿಬಿಟ್ಟಿತು. ನೀರೊಳಗೆ ಮುಳುಗಿ ಹೋಗುವವನ, ಹೆಬ್ಬಾವಿನ ಹಿಡಿತಕ್ಕೆ ಸಿಕ್ಕಿದವನ, ಹುಲಿಯಿಂದ ಅಪ್ಪಳಿಸಲ್ಪಟ್ಟವನ ಕರುಣಾಕ್ರಂದನವದು, "ಹಾ ಲಕ್ಷ್ಮಣಾ!"

ನಮಗೆ ದಿಗ್ಭ್ರಮೆಯಾಯಿತು. ನಿಶಾನಿಮೊಟ್ಟೆಯೇ ಒಡೆದಂತಾಯಿತು. "ಶೇಷಯ್ಯಾ ಶೇಷಯ್ಯಾ" ಎಂದು ತಾರ ಸ್ಥಾಯಿಯಲ್ಲಿ ಮೇಲೇರಿ ಕೆಳಗಿಳಿದು ಎಲ್ಲ ದಿಕ್ಕಿಗೆ ತಿರುಗಿ ಕಿರುಚಿದೆವು. ಕಾಡುಮೇಡುಗಳು ಕಣಿವೆ ತೆಮರುಗಳು ಮರುದನಿಗೈದವು – ಶೇಷಯ್ಯಾ. ಶೇಷಯ್ಯ ಇಲ್ಲ. ಶೇಷಯ್ಯ ಇಲ್ಲದೇ ಊರಿಗೆ ಮರಳುವುದು ಹೇಗೆ? ಇದೇನು ಅವಸ್ಥೆ ಒದಗಿತು. ಆಲೋಚನೆ ಮಾಡಲಾಗದೇ ಮಾತಾಡಲಾರದೇ ಮುಂದುವರಿಯಲಾಗದೇ ಶೂನ್ಯ ದೃಷ್ಟಿಯನ್ನು ಚೆಲ್ಲುತ್ತ ನಿಂತುಕೊಂಡೆವು. ಗಂಟೆ ೫ ಆಗಿತ್ತು. ಸೂರ್ಯ ಆಗಲೇ ದೂರದ ಬೆಟ್ಟದ ಹಿಂದೆ ಮರೆಯಾಗಿದ್ದ. ಕರಿನೆರಳು ಕರಾಳವಾಗಿ ದೌಷ್ಟ್ಯದ ಪ್ರತೀಕವಾಗಿ ಹರಡಿತ್ತು. ದಾರಿ ಇನ್ನೂ ನಾಲ್ಕು ಮೈಲಿದ್ದಿರಬಹುದು. ಮತ್ತೆ ಮುಂದಿನ ನಿರ್ಧಾರ ಕೈಗೊಂಡೆವು. ಅದರ ಪ್ರಕಾರ ನಾನೊಬ್ಬನೆ ಮುಂದೆ ಓಡಿ ಓಡಿ ಹೋಗಿ ದಾರಿ ಸೇರಬೇಕು. ಅಲ್ಲಿ ಶ್ರೇಷ್ಠನ ಕಾರಿನಲ್ಲಿ ಕುಳಿತು ಮಡಿಕೇರಿಗೆ ಹೋಗಿ ಜನ, ಲೈಟು, ಡಾಕ್ಟರರು, ಬೇಟೆಗಾರರು ಎಲ್ಲರನ್ನೂ ಕರೆತರಬೇಕು. ರಾತ್ರಿಯಿಡೀ ಆ ಭೀಕರ ಏಕಾಂತತೆಯಲ್ಲಿ ಶೇಷಯ್ಯನನ್ನು ಹುಡುಕಬೇಕು. ಉಳಿದವರು ಅಲ್ಲಿಯೇ ಒಬ್ಬರಿಗೊಬ್ಬರು ಕಾಣುವಷ್ಟು ದೂರದಲ್ಲಿ ಹರಡಿ ಕಾಲುದಾರಿಯಲ್ಲಿಯೇ ಮುಂದೆ ನಿಧಾನವಾಗಿ ಇಳಿಯುತ್ತ ಶೇಷಯ್ಯ ನಾಮಸ್ಮರಣೆ ಗಟ್ಟಿಯಾಗಿ ಮಾಡುತ್ತ ಅರಸುತ್ತ ಸಾಗಬೇಕು. ಬೆಟ್ಟದ ತಳದಲ್ಲಿ ಕುಳಿತಿರಬೇಕು – ನಾನು ಬರುವ ತನಕ.

ನಾನು ಒಂದು ಮೈಲು ಓಡಿದೆ. ಓಡಿದೆನೋ ಹಾರಿದೆನೋ ಅಂತೂ ಬೆಟ್ಟದ ಬುಡಕ್ಕೆ ಬಂದಿದ್ದೆ. ಅಷ್ಟರಲ್ಲಿಯೇ ದೂರದ ಕಣಿವೆಯಿಂದ ಕೇಕೆ ಹಾಕಿ ಕರೆಯುತ್ತಿದ್ದಾರೆ ಶೇಷಯ್ಯ, "ನಾ ಫಸ್ಟು!" ಪಂಥದಲ್ಲಿ ಅವರು ಗೆದ್ದದ್ದು ನಿಜ. ಹತ್ತಿರ ಹೋಗಿ ನೋಡಿದೆ: ಮೈ ಕೈ ತೀರ ಗಾಯ, ಕೆಸರು. ಬಟ್ಟೆ ಹರಿದು ಹೋಗಿದೆ. ಆ ಗಳಿಗೆಯಲ್ಲಿ ಮೊದಲ ಭಾವ "ಎಲಾ ಪ್ರಾಣೀ" ಎನ್ನುವ ತಿರಸ್ಕಾರ. ಕೂಡಲೇ ಅಮಿತ ಸಂತೋಷ. ಈ ತುಮುಲಗಳ ನಡುವೆ ನನಗೆ ಮಾತೇ ಹೊರಡಲಿಲ್ಲ. ಅಂತೂ ಅವರು ಶೇಷಯ್ಯ ಹೌದೆಂದು ಸಮೀಪದಿಂದ ಖಚಿತವಾದ ಮೇಲೆ, "ಏನು ನಿಮ್ಮ ಕತೆ? ಬಹಳ ಹೆದರಿಸಿ ಬಿಟ್ಟಿರಪ್ಪ" ಎಂದು ನಿಟ್ಟುಸಿರು ಬಿಟ್ಟೆ.

"ನಾನು ನಿಮ್ಮಿಂದ ಮುಂದೆ ಇಳಿದಂತೆ ಆ ಬೆಟ್ಟ ನನ್ನನ್ನು ಜೋರು ಜೋರಾಗಿ ನೂಕತೊಡಗಿತು. ನಡೆಯುವುದು ಕಷ್ಟವಾಗಿ ಓಡತೊಡಗಿದೆ. ಮುಂದೆ ಆಳೆರಡೆತ್ತರ ಹುಲ್ಲು ರಾಶಿಯೊಳಗೆ ಸಿಕ್ಕಿಹಾಕಿಕೊಂಡು ದಿಕ್ಕು ತಪ್ಪಿಹೋಯಿತು. ಅಂತೂ ಕೆಳಗೆ ಕೆಳಗೆಂದು ಕಾಲು ಹಾಕಿದೆ. ಒಂದೆಡೆ ಕಾಲಿಟ್ಟೆ – ಧಡೀರನೆ ಕುಸಿದು ಜಾರಿ ಪಾತಾಳಕ್ಕೆ ಬಿದ್ದೆ. ಆಗಲೇ ನಿಮ್ಮ ಹೆಸರನ್ನು ಕೂಗಿ ಕರೆದದ್ದು. ಆ ಆಳದಲ್ಲಿ ನೀರು ಕೆಸರು ಕೊಳೆತ ಎಲೆ ತುಂಬಿದ್ದುದರಿಂದಲೂ ಜಾರಿದ ಪ್ರಪಾತದ ಮೈ ಎಲ್ಲ ಹುಲ್ಲೇ ಮುಚ್ಚಿದ್ದುದರಿಂದಲೂ ನನಗೇನೂ ಅಪಾಯವಾಗಲಿಲ್ಲ. ನಾನೊಂದು ದಟ್ಟವಾದ ಕಾಡಿನ ಬುಡದಲ್ಲಿ ಬಿದ್ದಿದ್ದೆ. ಮೇಲೆ ನೋಡಿದರೆ ೩೦ ಅಡಿಯಾದರೂ ನಾನು ಕುಸಿದಿರಬೇಕೆಂದು ತೋರಿತು. ಪೂರ್ಣ ಕತ್ತಲೆ, ದಾರಿ ಎಲ್ಲಿಯೂ ಇಲ್ಲ. ನೀರು ಯಾವ ಕಡೆ ಹರಿಯುತ್ತಿದೆ ಎಂದು ಕೈಯಿಂದ ಪರಡಿ ತಡವಿ ಪರಿಶೀಲಿಸಿದೆ. ಅದರ ಗತಿಯ ಕಡೆಗೆ ತೆವಳಿ ಹರಿದು ಗಿಡಗಳನ್ನು ಮುರಿದು ಮುಂದುವರಿದೆ. ಹೀಗೆ ಎಷ್ಟೋ ಹೊತ್ತು ಸರಿಯುವಾಗ ಕಾಡಿನಿಂದ ಹೊರಗೆ ಬಂದೆ ಮತ್ತೆ ಇಲ್ಲಿಗೆ ತಲಪಿದೆ. ಇಲ್ಲಿಯ ಕಾಲ್ದಾರಿ ಎಲ್ಲ ನೋಡಿ ನೀವಿಲ್ಲಿಗೆ ಬಂದೇ ಬರುವಿರಿ ಎಂದು ಇಲ್ಲಿಯೇ ನಿಂತೆ!"

# ಇನ್ನು ಕುದುರೆಮುಖದೆಡೆಗೆ ಮರಳೋಣ

## ಅಧ್ಯಾಯ ಇಪ್ಪತ್ನಾಲ್ಕು



ಕುದುರೆಮುಖದ ಶಿಖರದೆಡೆಗೆ ಸೀದಾ ನಡೆಯಲು ಅಡ್ಡ ತಿರುಗಿದವನು ಕಾವೇರಿಯಪ್ಪ. ಇವನು ಕೊಡಗಿನ ಚತುರ. ನಮ್ಮ ತಂಡದ ಮೂಕ ಸದಸ್ಯ. ಇವನಾಯಿತು, ಇವನ ಕೆಲಸವಾಯಿತು. ಒಳ್ಳೆಯ ಶಿಸ್ತುಗಾರ, ದಕ್ಷ, ಸಮರ್ಥ. ಇವನನ್ನು ಹುಡುಗರು ಬ್ರಹ್ಮಗಿರಿ ಎಂದು ಸಾರ್ಥಕವಾಗಿ ಕರೆಯುತ್ತಿದ್ದರು. ಕುದುರೆಮುಖ ಇವನಿಗೆ ತವರ್ಮನೆ ಇದ್ದ ಹಾಗೆ. ಅದರ ಶ್ರೇಣಿಗೆ ಬಂದೊಡನೆ ನೇರದಾರಿ ತುಳಿದ. ಹಿಂದೆ ನೋಡಲಿಲ್ಲ. ಮೇಲೆ ನೋಡಲಿಲ್ಲ. ಹುಳು ಗೋಡೆಯ ಮೇಲೆ ಹರಿವಂತೆ ಏರತೊಡಗಿದ. ಲಕ್ಷ್ಮಿ, ಶ್ರೀಧರನ್, ಪಿಂಟೋ ಮೊದಲಾದವರು ಅವನ ಹಿಂದೆ ಹೊರಟರು. ಉಳಿದವರು ಬಲು ಹಿಂದೆ ಬಿದ್ದರು. ನಾನು ಎಲ್ಲರಿಗಿಂತಲೂ ಹಿಂದೆ ಇದ್ದರೂ ಇಡೀ ದೃಶ್ಯ ನನ್ನೆದುರು ಪ್ರಕಾಶಕ್ಕೆ ಬರುವಂತಿತ್ತು. ಸಿನಿಮಾ ಚಿತ್ರಪಟದ ಮೇಲೆ ಘಟನಾಪರಂಪರೆಗಳು ನಡೆಯುವಂತೆ. ಮೆಂಗಿಲಶೇಣವನ ಹಿಂದೆ ನಡೆದವರೂ ಸಾಕಷ್ಟು ಮಂದಿ. ಹಿಂದೆ ಇದ್ದ ನಾನು (ಪ್ರಾಯ ೪೨) ಯಾವ ದಾರಿಯಲ್ಲಿ ನಡೆಯಬೇಕು? ಸಂದಿಗ್ಧ ಪರಿಸ್ಥಿತಿ, ಪಕ್ವ ಪ್ರಾಯದ ಅನುಭವದ ದಾರಿಯೇ? ತರುಣ ಧಮನಿಯ ದಿಟ್ಟತನದ ಹಾದಿಯೇ? ಶಿಸ್ತಿನ ಪಥವೇ? ಸಾಹಸದ ನೂತನ ಮಾರ್ಗವೇ? ಇಂಥಲ್ಲೆಲ್ಲ ನಮ್ಮ ಗುರಿಯ ಸಾಧನೆ ಮುಖ್ಯ. ಗುರಿ ಎಂದರೆ ಕೊಡಿ ತಲಪುವುದು. ಆದ್ದರಿಂದ ನೇರ ದಾರಿಯೇ ಸರಿ ಎಂದು ನಾನೂ ಎಡಕ್ಕೆ ತಿರುಗಿದೆ. ಹುಡುಗರಾಗಲೇ ಶ್ರೇಣಿಯ ಅಂಚು ತಲಪಿ ಮರೆಯಾಗಿದ್ದರು. ಈಗ ಶಿಖರ ಕಾಣುತ್ತಿಲ್ಲ. ಮೇಲೆ ನೋಡಿದಷ್ಟು ಎತ್ತರಕ್ಕೆ ಕಲ್ಲು, ಮಣ್ಣು, ಜೊಂಡುಗಳ ರಾಶಿ. ಹಿಂದೆ ನೋಡುವಂತಿಲ್ಲ. ಹತ್ತಿದಷ್ಟೂ ಮುಗಿಯದು. ಒಂದುಹೆಜ್ಜೆಗೆ ಒಂದು ಚಮಚ ಬೆವರಿನಂತೆ ಹರಿದು ಮೈ ಎಲ್ಲ ಒದ್ದೆ. ದಾರಿ ತಪ್ಪಿ ಹೋಯಿತೇ? ಬೇರೆಲ್ಲಿಗಾದರೂ ಏರುತ್ತಿರುವೆನೇ? ಗಂಟೆ ೪.೩೦ ದಾಟಿತ್ತು. ಆದ್ದರಿಂದ ಅಪಾಯವೇನೂ ಇಲ್ಲ. ನಾನು ನೆಲದವರೆಗೆ ಬಗ್ಗಿ ತೆವಳುತ್ತಿದ್ದೆ. ಇದ್ದಕ್ಕಿದ್ದಂತೆ ಕುರುಡನಿಗೆ ಕಣ್ಣು ಬಂದರೆ ಆಗಬಹುದಾದಂಥ ಅನುಭವ. ಎಲ್ಲೆಲ್ಲಿಯೂ ಬೆಳಕಿನ ಕಡಲು. ವಿಶಾಲ ವಿಶ್ವ ನೋಡನೋಡುತ್ತಿದ್ದಂತೆಯೇ ತೆರೆ ತೆರೆಯುತ್ತ ವಿಸ್ತಾರವಾಗಿ ಹರಡಿ ಹೋಯಿತು. ಆ ಮೊದಲೇ ತಲಪಿದ್ದ ಹುಡುಗರು ಜಯ ಘೋಷಣೆ ಮಾಡಿದರು. ೧೨ನೇ ಮೈಸೂರು ಈಗ ಅಧಿಕೃತವಾಗಿ ಕುದುರೆಮುಖದ ಹೆಬ್ಬಂಡೆಯ ಮೇಲೆ ಜಯಭೇರಿ ಬಾರಿಸಿತು! ಆ ಗಳಿಗೆಯಲ್ಲಿ ಭಾವಪಾರವಶ್ಯದಿಂದ ಮನಸ್ಸಿನಲ್ಲಿ ಯೋಚನೆ ಕೈದಾಯಿತು. ೬೨೫೭ ಅಡಿ ಎತ್ತರದ ಮೇಲೆ ನಾವಿದ್ದೆವು. ಆ ಮಹೌನ್ನತ್ಯ ನಮಗೆ ಮಣಿದಿತ್ತು ಎನ್ನುವುದು ದಾರ್ಷ್ಟ್ಯದ ಮಾತು. ನಾವದನ್ನು ಸಮರ್ಥ ಪ್ರಯತ್ನದಿಂದ ಸಾಧಿಸಿದ್ದೆವು. ಅಲ್ಲಿ ಮೂಡಿದ ಭಾವ ಒಂದು ವಿಧದ ಸಮಾಧಿ ಸ್ಥಿತಿ. ಅಲ್ಲಿಗೆ ಹೋಗಿ ಅದನ್ನು ಅನುಭವಿಸಬೇಕೇ ವಿನಾ ಅಲ್ಲಿಂದ ಹಿಂತಿರುಗಿದ ನಮ್ಮ ಕೆಳಗಿನ ಮಟ್ಟದಲ್ಲಿ ಕಲ್ಪನಾದಾರಿದ್ರ್ಯ ಮುಸುಕಿದಾಗಿನ ವಿವರಣೆಯಿಂದಲ್ಲ. ವಾಸ್ತವತೆಯ ಮೂಕಾಶ್ಚರ್ಯಗಳ ಪ್ರತಿಬಿಂಬ ಸಾಹಿತ್ಯವಾಗುವುದು ಸಾಧ್ಯವಿಲ್ಲ. ನಾವು ಅಲ್ಲಿ ಕುಳಿತು ಭಾವೋದ್ವೇಗದಲ್ಲಿ ಅನಂತವನ್ನು ಅಳೆಯಲು ಪ್ರಯತ್ನಿಸುತ್ತಿದ್ದೆವು. ನಮ್ಮ ದೃಗನುಭವಗಳ ಮಿತಿಯಿಂದ ಅನಂತವು ಮಿತಿಗೆ ಒಳಪಡುತ್ತಿತ್ತೇ ವಿನಾ ಅನಂತದ ಸ್ವಾಭಾವಿಕ ಗುಣದಿಂದಲ್ಲ. ನಡೆದು ಬಂದ ದಾರಿ ದೂರದ ಕಣಿವೆಯಲ್ಲಿ ನುಸುಳಿ ಮಸಳಿ ಮಾಯವಾಗಿತ್ತು. ಎರಡು ದಿವಸಗಳಾ ಹಿಂದ ನಾವು ಏರಿದ್ದ ಬಂಡೆ, ಎಷ್ಟು ದೊಡ್ಡ ಗುಂಡುಕಲ್ಲು ಬಂಡೆ ಎಂದು ನಮಗೆ ಭಾವನೆ ತರಿಸಿದ್ದ ಜಮಾಲಾಬಾದ್, ಈಗ ಪ್ರಯಾಸದಿಂದ ಕಾಣಬಹುದಾದ ಮಣ್ಣು ಹೆಂಟೆಯಾಗಿತ್ತು. ಔನ್ನತ್ಯದ ಮಹಿಮೆಯೇ ಇದು. ಸಾಹಸದಿಂದ ಅದನ್ನೇರಿ ಅದರಲ್ಲಿ ಒಂದಾದರೆ ನಾವೂ ಹಿರಿಯರಾಗುತ್ತೇವೆ. ಅಲ್ಲಿ ಮೂಡುವುದು ಸಮರ್ಪಣ ಭಾವ. ನಾವು ಇವನ್ನು ಸಾಧಿಸಿದೆವು ಎಂದು ಅನ್ನಿಸುವುದಿಲ್ಲ – ಈ ಔನ್ನತ್ಯದ ಚೇತನ ನಮ್ಮನ್ನು ಅಲ್ಲಿಗೆ ಆಕರ್ಷಿಸಿ ಬರಸೆಳೆಯಿತು ಎಂದೆನ್ನಿಸುವುದು. ದೃಷ್ಟಿದಿಗಂತ ವಿಸ್ತಾರವಾಗುವುದು.

ಮರುಕ್ಷಣ ಉಳಿದವರ ಚಿಂತೆ. ದೂರದರ್ಶಿಯಿಂದ ನೋಡಿದರೆ ಅವರ ಸುಳಿವು ಎಲ್ಲಿಯೂ ಕಾಣುವುದಿಲ್ಲ. ಮೆಂಗಿಲ ಶೇಣವ, ಅಡುಗೆಯವರು, ಸೇವಕರು, ೧೭ ಕ್ಯಾಡೆಟ್ಟುಗಳು ಮತ್ತು ಶಿವಪ್ಪ ಆ ತಂಡದಲ್ಲಿದ್ದುದರಿಂದ ನಾವೇ 'ಮೈನಾರಿಟಿ'ಯಲ್ಲಿದ್ದೆವು. ಅಲ್ಲದೇ ನಾವು ಉಳಿದುಕೊಳ್ಳಬೇಕಾದ ಪ್ರದೇಶ ಆ ಕಡೆ ಎಲ್ಲೋ ಇದೆ ಎಂದು ಹಿಂದಿನ ಅನುಭವದಿಂದ ತಿಳಿದಿತ್ತು. ನಾವು ಕುಳಿತಿದ್ದ ಬಂಡೆಯಷ್ಟೇ ಅಥವಾ ಅದಕ್ಕಿಂತ ಸ್ವಲ್ಪ ಎತ್ತರವಾದ ಇನ್ನೆರಡು ಶಿಖರಗಳು ನಮಗೆ ಸಮೀಪದಲ್ಲೇ ಇದ್ದುವು. ದಿಟ್ಟಿಸಿ ನೋಡುತ್ತಿದ್ದಂತೆಯೇ ಅವು ನಮಗಿಂತ ಎತ್ತರವೆಂಬ ಭಾವನೆ ದೃಢವಾಯಿತು. ಹಾಗಾದರೆ ನಾವು ಏರಿದ್ದು ಕೃತ್ರಿಮ ಕುದುರೆಮುಖವೇ? ಶೇಣವನ ತಂಡ ಕಾಡನ್ನು

ಸುತ್ತುವರಿದು ನಮಗಿಂತ ಮೊದಲೇ ಅಲ್ಲಿಗೇ ತಲಪಿರಬಹುದೇ? ಆಚೆ ಕಡೆಯ ಮೈಯ್ಯಲ್ಲಿ ಬರುತ್ತಿರುವವರೋ ಏನೋ? ನಮ್ಮ ಕಾವೇರಿಯಪ್ಪ, ಮೋಹನ ಅಲ್ಲಿಗೆ ಧಾವಿಸಿದರು. ಆದರೆ ನೂರು ಇನ್ನೂರು ಅಡಿ ಇಳಿದು ಮತ್ತೆ ಅಷ್ಟೇ ಹತ್ತಬೇಕಾದ ಪ್ರಮೇಯ. ಅವರಿಗೆ ಆ ದೂರ ತಲಪಲು ೨೦ ಮಿನಿಟು ಬೇಕಾಯಿತು. ಕಾಣಲು ಇಷ್ಟು ಹತ್ತಿರ, ನಡೆದರೆ ಅಷ್ಟು ದೂರ, ಬೆಟ್ಟಗಳ ಅವಸ್ಥೆಯೇ ಹೀಗೆ.

ಮುಂದೆ ಸ್ವಲ್ಪ ಹೊತ್ತಿನಲ್ಲಿ ನಾವು ಕುಳಿತಿದ್ದ ಬಂಡೆಯ ಶ್ರೇಣಿಯಲ್ಲಿ ದೂರದ ತಗ್ಗಿನಿಂದ ಪರ್ವತರೇಖೆಯನ್ನು ಆ ಕಡೆಯಿಂದ ಈ ಕಡೆಗೆ ದಾಟಿ ಕೆಲವರು ಹರಿಯುತ್ತಿರುವುದು ಕಂಡಿತು – ಬಿಳಿ ಚುಕ್ಕಿಗಳ ಚಲನೆ ಮಾತ್ರ ಗುರುತಿಸಿದೆವು. ದೂರದರ್ಶಿಯಿಂದ ನೋಡಿದಾಗ ಶೇಣವನನ್ನು ಕಂಡು ಧೈರ್ಯವಾಯಿತು. ಹಿಂದೆ ಹುಡುಗರೂ ಇದ್ದರು. ಅವರು ಯಾರೂ ಗಂಟು ಹೊತ್ತಿರಲಿಲ್ಲ. ಆದ್ದರಿಂದ ಆ ತಗ್ಗಿನಲ್ಲಿಯೇ ನಾವು ತಂಗಬೇಕಾದ ಪ್ರದೇಶವಿದೆ ಎಂದು ಖಾತ್ರಿಯಾಯಿತು. ನಾವು ಅವರೆಡೆಗೆ ಓಡಲು ತೊಡಗಿದೆವು. ಅಂದರೆ ಕುದುರೆ ಮುಖದ ಕತ್ತಿನಮೇಲೆ ನಿಬಿಡಾರಣ್ಯದ (ಅಯಾಲು) ಅಂಚಿನಲ್ಲಿ ಇಳಿದೆವು.

"ಹ್ವಾ! ನಾವು ಬಂಗ್ಲೆಗೆ ಹೋಗಿ ಟೀ ಕಾಯಿಸಲು ಏರ್ಪಾಡು ಮಾಡಿ ನೀವೆಲ್ಲಿದ್ದೀರೆಂದು ಹುಡುಕಲು ಬಂದದ್ದು!" ೬೦೦೦ ಅಡಿ ಎತ್ತರದಲ್ಲಿಯೂ ಶೇಣವನಿಗೆ ಅದೇ ಹುರುಪು, ಅದೇ ಮಿಂಚು, ಅದೇ ಆತ್ಮೀಯತೆ. ಎಲ್ಲರೂ ಅಲ್ಲಿಗೆ ನಡೆದೆವು. ಶಿಖರದಿಂದ ಮುಕ್ಕಾಲು ಮೈಲು ದೂರದಲ್ಲಿ, ಸುಮಾರು ೫೦೦ ಅಡಿ ತಗ್ಗಿನಲ್ಲಿ ಬಂಗ್ಲೆಗಳ ಭಗ್ನಾವಶೇಷಗಳಿವೆ. ೨೦ನೆಯ ಶತಮಾನದ ತರುಣದಲ್ಲಿ ಮಂಗಳೂರಿನಲ್ಲಿರುತ್ತಿದ್ದ ವಿದೇಶೀ ಪಾದ್ರಿಗಳು ಬೇಸಗೆಯಲ್ಲಿ ಬಂದು ತಂಗಲು ಅಲ್ಲಿ ಬಂಗ್ಲೆಗಳನ್ನೂ ಪ್ರಾರ್ಥನೆಗಾಗಿ ಇಗರ್ಜಿಯನ್ನೂ ಕಟ್ಟಿಸಿದ್ದರು. ಮಂಗಳೂರು ಇಟ್ಟಿಗೆ, ಹಂಚು, ಮರದ ಭಾರೀ ತೊಲೆಗಳಿಂದ ಸುಭದ್ರವಾಗಿ ಅವನ್ನು ರಚಿಸಿದ್ದರಂತೆ. ನಾನು ಹತ್ತು ವರ್ಷಗಳ ಹಿಂದೆ ಹೋಗಿದ್ದಾಗ ಇಗರ್ಜಿಯ ಗೋಡೆಯ ಮೇಲೆ ಏಸುಕ್ರಿಸ್ತನ ಅವತಾರ ಸಂಬಂಧವಾದ ವಿವಿಧ ತೈಲ ಚಿತ್ರಗಳನ್ನು ನೋಡಿ ವಿಸ್ಮಿತನಾಗಿದ್ದೆ. ಅವರ ಸೌಂದರ್ಯ ದೃಷ್ಟಿ ಮತ್ತು ಸಾಹಸ ಪ್ರಿಯತೆ ನಿಜವಾಗಿಯೂ ಶ್ಲಾಘನೀಯ. ಏಕಾಂತವಾಗಿ ನಿಸರ್ಗದಲ್ಲಿ ತನ್ಮಯತೆ ಹೊಂದುವುದರಲ್ಲಿ ಮಹದಾನಂದವನ್ನು ಅವರು ಪಡೆಯುತ್ತಿದ್ದರು. ಮೆಂಗಿಲ ಶೇಣವನ ಹೇಳಿಕೆಯ ಪ್ರಕಾರ ೧೯೩೦ರಿಂದೀಚೆಗೆ ವಿದೇಶೀ ಪಾದ್ರಿಗಳು ಬರಲಿಲ್ಲ. ದೇಶೀ ಪಾದ್ರಿಗಳಿಗೆ ಇದು ಬೇಕಾಗಲಿಲ್ಲ. ಬಂಗ್ಲೆಗಳು ಹಾಳುಬಿದ್ದುವು. ಗಾಳಿ, ಮಳೆ, ಕಾಡುಬೆಂಕಿ ಎಂಬ ನೈಸರ್ಗಿಕ ವಿಘಾತಕ ಶಕ್ತಿಗಳು ಒಂದು ಕಡೆ. ಅಪೂರ್ವಕ್ಕೆ ಬರುತ್ತಿದ್ದವರ ಸ್ವಂತ ಹಿತಸಾಧನೆಯ ನಾಶಕೃತ್ಯ ಇನ್ನೊಂದು ಕಡೆ; ಆ ಕಾಡಿನ ನಡುವೆಯೂ ಇವರಿಗೆ ಬೆಂಕಿ ಮಾಡಲು ಸಿಕ್ಕಿದ್ದು ಮರದ ತೊಲೆಗಳು. ಬೆಂಕಿ ಮಾಡಿದ್ದು ನೆಲ ಹಾಸಿನ ಮೇಲೆ. ಇವುಗಳಿಂದ ಹತಿಗೊಂಡ ಮೇಲೆ ಉಳಿದಿದ್ದೇನು? ಹಾಳುಗರೆಯುತ್ತ ಹಾಮಾಸು ಹಿಡಿದಿರುವ ತುಂಡು ಗೋಡೆಗಳು. ಚದರಿ ಬಿದ್ದಿರುವ ಇಟ್ಟಿಗೆಯ ತುಂಡುಗಳು. ಬಂಗ್ಲೆಗಳ ನೆಲವನ್ನೂ ಅಡಿಪಾಯವನ್ನೂ ಕಾಡು ಕಬಳಿಸಿವೆ. ಹೀಗಾಗಿ ಅಲ್ಲಿ ಕೂರಲು ಸಹ ಸಾಧ್ಯವಿಲ್ಲ. ಅಂಗಳದ ಅವಸ್ಥೆ ಇನ್ನೂ ಕಠಿಣ – ನೊಜೆ ಹುಲ್ಲಿನ ದೊಡ್ಡ ದೊಡ್ಡ ದಿಂಡುಗಳು ಬೆಳೆದಿದ್ದುದರಿಂದ ಅಲ್ಲಿ ಕೂರುವುದು ಅಥವಾ ಮಲಗುವುದು ಕಲ್ಲು ರಾಶಿಯ ಮೇಲೆ ಕುಳಿತಷ್ಟೇ ಸುಖ! ಆದರೂ ನಮ್ಮ ಶೇಣವನ ಪಂಗಡ ಅಲ್ಲಿಯೇ ಬಂದು ಬೀಡುಬಿಟ್ಟಿತ್ತು – ನ್ಯಾಯವೇ, ನಿರ್ಧಾರವನ್ನು ತೆಗೆದುಕೊಳ್ಳಬೇಕಾದವ ನಾನಾದ್ದರಿಂದ ತಾತ್ಕಾಲಿಕವಾಗಿ ಹೊರೆಯನ್ನು ಅಲ್ಲಿ ಇಳಿಸಿ ಅಲ್ಲಿಯೇ ಚಹಾ ಕಾಸಲು ಏರ್ಪಾಡು ಮುಂದುವರಿದಿತ್ತು. ಹರೂನ್ ಮತ್ತು ಅಡುಗೆಯವರು ಸೇರಿ ಕೆಳಗಿನ ಒಂದು ಫರ್ಲಾಂಗ್ ದೂರದ ತೊರೆಯಿಂದ ನೀರು ತರಿಸಿ ಟೀ ಮಾಡಿಟ್ಟಿದ್ದರು. ಕುಡಿಯುವಷ್ಟು ಚಹಾ, ತಿನ್ನುವಷ್ಟು ಮೈಸೂರುಪಾಕ, ಬಾದುಶಾ, ಚೌಚೌ. ಅವುಗಳ ರುಚಿ ಕುದುರೆಮುಖದ ಶಿಖರದ ಮೇಲಿನ ಪ್ರಥಮಾನುಭವದಷ್ಟೆ ಮಧುರವಾದದ್ದು. ಮುಂದಿನ ನಿರ್ಧಾರ? ಆ ಅಂಗಳದಲ್ಲಿ ನೆಲೆಯೂರುವುದು ಸಾಧ್ಯವಿಲ್ಲ. ನೀರು ತರುವುದೊಂದು ರಾಜಸೂಯವೇ. ಎಂದೇ ಎಲ್ಲಿ ನೀರಿನ ಸೆಲೆಯಿದೆಯೋ ಅಲ್ಲಿ ನಮ್ಮ ನೆಲೆವನೆ ಎಂದು ನಿಶ್ಚೈಸಿ ಅಲ್ಲಿಂದ ಗಂಟುಮೂಟೆ ಕಿತ್ತುಕೊಂಡು ಕೆಳಗಿಳಿದೆವು.

# ಕುದುರೆಮುಖದ ಪರ್ಣ ಕುಟೀರ

### ಅಧ್ಯಾಯ ಇಪ್ಪತ್ತೈದು

ನಾವೀಗ ಕುದುರೆಮುಖ ಶ್ರೇಣಿಯ ವನರಾಶಿಯ ಮಗ್ಗುಲಿನ ಇಳಿಜಾರಿನಲ್ಲಿದ್ದೇವೆ. ನಮಗೂ ಶಿಖರಕ್ಕೂ ನಡುವೆ ಗೊಂಡಾರಣ್ಯ ಬೆಳೆದಿದೆ. ಕುದುರೆಮುಖ ಆಚೆ ಮಗ್ಗುಲಲ್ಲಿ (ನಾವು ಏರಿಬಂದ ವಲಯ) ಒಂದು ಚಿಕ್ಕ ಗಿಡವೂ ಇಲ್ಲ. ಈಚೆ ಮಗ್ಗುಲಲ್ಲಿ ಗೊಂಡಾರಣ್ಯ! ಕಾರಣವಿಷ್ಟೇ – ಆಚೆ ಮಗ್ಗುಲಲ್ಲಿ ಗಾಳಿ ಬೆಂಕಿಗಳ ಹೊಡೆತ ವಿಪರೀತ. ಹಾಗಾಗಿ ಬೆಳೆಯುವ ಸಸ್ಯ ಒಂದೇ, ನೊಜೆಹುಲ್ಲು. ನಿಜ, "ಹುಲ್ಲಾಗು ಬೆಟ್ಟದಡಿ!"

ಕುರುಚಲು ಗಿಡಗಳನ್ನು ನಿವಾರಿಸಿಕೊಂಡು ಕೆಳಗೆ ಇಳಿದಂತೆ ದೊಡ್ಡದೊಂದು ಗೊಸರು ಭೂಮಿ. ಅದನ್ನಿಡೀ ನೊಜೆ ಹುಲ್ಲಿನ ದಿಂಡುಗಳು ಆಕ್ರಮಿಸಿವೆ. ಇದರ ದೂರದ ಅಂಚು ಗೊಂಡಾರಣ್ಯ. ಅಲ್ಲೇ ಒಂದು ಕಿರುತೊರೆ ಕುಪ್ಪಳಿಸಿ ದಾಟಿದೆವು. ಅದು (ನಮ್ಮ ಎಡಗಡೆಯ) ಕುದುರೆಮುಖ ಶಿಖರದಲ್ಲಿ ಹುಟ್ಟಿ ಕಾಡಿನೆಡೆಗಾಗಿ ಹರಿದುಬರುತ್ತಿದ್ದ ತೀರ್ಥ. ಅದರ ದಂಡೆಯಲ್ಲಿ ನೂರು ಜನ ಸುಖವಾಗಿ ಕೂರುವಷ್ಟು ವಿಶಾಲವಾದ ಹಾಸುಗಲ್ಲು ಹಬ್ಬಿತ್ತು. ಇದರಿಂದ ಮುಂದೆ ದಿಬ್ಬದಲ್ಲಿ ಯಾರೋ ಪುಣ್ಯಾತ್ಮರು ಹಿಂದೆ ಬಂದಿದ್ದವರು, ಕಡಿದು ಸಿದ್ಧಪಡಿಸಿದ್ದ



ಮಣ್ಣಿನ ವಿಶಾಲವಾದ ಎರಡೆರಡು ವೇದಿಕೆಗಳು. ಇವನ್ನು ಆವರಿಸುವಂತೆ ಬೆಳೆದಿರುವ ಕಾಡು ಮರಗಳು! ಬಂಡೆ ಕಲ್ಲು ಮತ್ತು ಮಣ್ಣಿನ ವೇದಿಕೆಗಳ ಮೇಲೆ ಮರಗಳ ಕೊಂಬೆಗಳು ನಿಬಿಡವಾಗಿ ಹರಡಿ ನೈಸರ್ಗಿಕ ಮಾಡನ್ನು ನಿರ್ಮಿಸಿದ್ದವು. ನೀರು, ಅದರ ಪಕ್ಕದಲ್ಲಿ ಕುಳಿತು ಮಜಾ ಮಾಡಲು ಹಾಸುಗಲ್ಲು, ಅದರ ಇನ್ನೊಂದು ಬದಿಯಲ್ಲಿ ತಂಗಲು ಪರ್ಣಕುಟೀರ – ಬೇರೇನು ಬೇಕು? ಹಿಂದೆ ಬಂದವರು ಆ ವೇದಿಕೆಗಳ ಮೇಲೆ ಬೇಕಾದಷ್ಟು ನೊಜೆ ಹುಲ್ಲನ್ನು ಕೊಯ್ದು ಹಾಸಿದ್ದರು. ಹೀಗಾಗಿ ನಮಗೆಲ್ಲ ಸುಪ್ಪತ್ತಿಗೆಯ ಸೌಭಾಗ್ಯವೂ ಲಭಿಸಿತು. ನೀರಂಚಿನಲ್ಲಿ ಒಲೆ ಹೂಡಿದೆವು. ಅಲ್ಲಿಯೇ ಸಮೀಪದಲ್ಲಿ ಉಗ್ರಾಣ ಸ್ಥಾಪಿಸಿದೆವು. ಬೆಟ್ಟವನ್ನೇರುವ ಮೊದಲು ಪಟ್ಟಿಯ ಪ್ರಕಾರ ಕೊಟ್ಟಿದ್ದ ಸಾಮಗ್ರಿಗಳೆಲ್ಲವನ್ನೂ ಅದೇ ಪ್ರಕಾರ ಹಿಂದೆ ಪಡೆದು ಶೇಖರಿಸಿದೆವು. ಸಾಮೂಹಿಕವಾಗಿ ನಿರ್ವಹಿಸುವ ಯಾವ ಚಟುವಟಿಕೆಯಲ್ಲಿಯೂ ವೈಯಕ್ತಿಕವಾದ ಹೊಣೆಗಾರಿಕೆಯನ್ನು ಸ್ಪಷ್ಟವಾಗಿ ಮೊದಲೇ ವಿಧಿಸದಿದ್ದರೆ ಕಠಿಣ ಸನ್ನಿವೇಶ ಒದಗಿ ಬಂದಾಗ ಎಲ್ಲರೂ ಧರ್ಮಾರ್ಥ ವಿಪುಲ ಸೂಚನೆ ನೀಡುವವರೇ. ಎಲ್ಲರೂ ಮನಸ್ಸಿನಲ್ಲಿ ಮುಂದಾಳುವನ್ನು ಶಪಿಸುವವರೇ, ಪಟ್ಟಿಯನ್ನು ಮಾಡದೇ ಸಾಮಗ್ರಿಗಳನ್ನು ಹಾಗೆಯೇ ಕೈಗೆ ಬಂದಂತೆ ಹುಡುಗರ ಬೆನ್ನಮೇಲೆ ಹೇರಿದ್ದಿದ್ದರೆ, ಮೊದಲನೆಯದಾಗಿ ಭಾರದ ಸಮವಾದ ಹಂಚುವಿಕೆ ಆಗಿರುತ್ತಿರಲಿಲ್ಲ. ಇದರಿಂದ ಹೆಚ್ಚು ಭಾರ ಹೊರಬೇಕಾದವರಲ್ಲಿ ಅತೃಪ್ತಿ ಮೂಡಿರುತ್ತಿತ್ತು. ಎರಡನೆಯದಾಗಿ ಬಿಸ್ಕೆಟ್, ಕಿತ್ತಳೆಹಣ್ಣು, ಟೊಮೆಟೋ, ಸಿಹಿ ತಿಂಡಿಯಂಥ ಜಿಹ್ವಾಕರ್ಶಕ ವಸ್ತುಗಳನ್ನು ಹೊತ್ತವರು ಕೆಲವರಾದರೂ ತಮ್ಮ ಬಾಹ್ಯ ಭಾರವನ್ನು ಆಂತರಿಕವನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದ್ದರೆ ಆಶ್ಚರ್ಯವೆನಿಸುತ್ತಿರಲಿಲ್ಲ. ಅದು ಕನಕದಾಸರಲ್ಲದವರಿಗೆ ಇರುವ ಸಹಜ ದೌರ್ಬಲ್ಯ.

ಕುದುರೆಮುಖದ ತೀರ್ಥ ಮಂಜುಗಡ್ಡೆಯಷ್ಟು ಕೋಟ. ಅತಿ ಶುಭ್ರ. ಡಾಕ್ಟರು ಮಹಾಶಯರೆಂದರು, “ಈ ನೀರಿಗೆ ಯಾವ ಬ್ಲೀಚಿಂಗ್ ಪೌಡರೂ ಬೇಡ.” ನಮ್ಮ ಹೊಸ ಎಲೆವನೆ, ನೊಜೆ ಹಾಸಿಗೆ, ಬಂಡೆ ಪಕ್ಕದ ಒಲೆ ಎಲ್ಲ ಸಿದ್ಧವಾದಾಗ ಸಂಜೆ ೬ ದಾಟಿತ್ತು. ೨೦ ಪೌಂಡು ಭಾರದ ‘ಸಿಂದಬಾದನ ಮುದುಕ’ನ್ನು ಕಳೆದುಕೊಂಡ ಮತ್ತು ಬೆಟ್ಟದ ಚಿಲುಮೆಯಿಂದ ಚೇತನ ಹೀರಿದ ನಾವೆಲ್ಲರೂ ಸೂರ್ಯಾಸ್ತಮಾನ ನೋಡಲು ಶಿಖರದೆಡೆಗೆ ಧಾವಿಸಿದೆವು.

೬೨೫೭ ಅಡಿ ಎತ್ತರದ ಆ ಬಂಡೆ ಮಂಡೆಯ ಮೇಲೆ ನಾವಿದ್ದೇವೆ – ಅಂತ್ಯದ ಕರಗಳ ಅಂಚಿನಲ್ಲಿ ನಾವು ಕುಳಿತಿದ್ದೇವೆ. ಕೆಳಗಿನಿಂದ ಕಾಣುವ ಭೀಕರತೆ ಈಗ ಅದಕ್ಕಿಲ್ಲ. ನಮ್ಮ ದೃಷ್ಟಿ ಹೋಗುವವರೆಗೆ ಎಲ್ಲಿಯೂ ನಮಗಿಂತ ಎತ್ತರದ ಶಿಖರವಿಲ್ಲ. ಸಮೀಪದ ಎರಡು ಶಿಖರಗಳೂ ಈಗ ಇದಕ್ಕಿಂತ ತಗ್ಗಾಗಿಯೇ ಕಂಡುವು. ನಮ್ಮ ದೃಷ್ಟಿ ದಿಗಂತ ಆ ಔನ್ನತ್ಯದಲ್ಲಿ ಅತಿಶಯವಾಗಿ ವಿಸಾರವಯಿತು. ಕಾಡು ಗುಡ್ಡ ಹೊಳೆ ಮುಂತಾದವು ನಕ್ಷೆಯ ಮೇಲಿನ ಎಳೇಗಳು. ಶಿವಪ್ಪ ಬರೆದರು:

ಭೂಮಂಡಲದ ರಾಶಿ ಬಣ್ಣ ಬಣ್ಣಗಳ ವೈವಿಧ್ಯ<br>ಕರ್ತಾರನ ಕಮ್ಮಟ

ದೃಷ್ಟಿ ದೂರಸಾಗಿದಂತೆ ಭೂಮಿ ಸಾಗರವನ್ನು ಸ್ವಾಗತಿಸಿ ಮುದ್ದಿಸುವ ಮಹಾವೃತ್ತ ಕಾಣಿಸಿತು. ಅದರಾಚೆ ನೀರು, ಕಡು ನೀಲಿಯನ್ನು ಮೆತ್ತಿದಂತೆ, ಅದರ ಮೇಲೆ ನೊರೆನೊರೆಯಾಗಿ ಪ್ರತಿಬಿಂಬಿಸುವ ತೆರೆ ಅದು ನೀರಿನ ರಾಶಿಯೆಂದು ತಿಳಿಸುವುದು. ಮತ್ತು ಮುಂದುವರಿದರೆ ಈ ಕಡುನೀಲಿ ಆಕಾಶದ ತೆಳು ನೀಲಿಯನ್ನು ಸಂಧಿಸುವ ಇನ್ನೊಂದು ಮಹಾವೃತ್ತ. ಅದರಿಂದಾಚೆಗೆ ಏನುಂಟೋ ಕುದುರೆಮುಖದಿಂದ ಕಾಣುವುದಿಲ್ಲ. ಮೇಲೆ ಗೋಳಾಕಾರದ ತಿಳಿ ನೀಲಿ ಬಣ್ಣದ ಬಾನು – ಕೆಳಗೆ ನರಪೇತಲನಾದ ನಾನು!

‘ಗಗನವನು ನೋಡು ಮೈ ನೀಲಿಗಟ್ಟುವವರೆಗೆ’ ಎಷ್ಟೊಂದು ಸಾರ್ಥಕ ನುಡಿ. ಅಂಥ ನೀಲ ಪರದೆಗೆ ಅಂಟಿಸಿದ ಕೆಂಪು ತಗಡು ಸೂರ್ಯ. ಸೂರ್ಯ ರಶ್ಮಿ ಈಗ ಕಣ್ಣು ಕುಕ್ಕುವುದಿಲ್ಲ. ಸೂರ್ಯಬಿಂಬ ಅದರ ಬದಿಗಳಲ್ಲಿ ಉದ್ದುದ್ದವಾಗಿ ‘ದೇವರ ಪೆಪ್ಪರ್ ಮಿಂಟ್’ನಂತೆ ಕಾಣುವುದು

ಸಹಜ. ತೆಳು ನೀಲಿ ತನ್ನ ದಿನದ ಗಳಿಕೆಯ ಕಾಣಿಕೆಯಾಗಿ ಕಡು ನೀಲಿಗೆ ನೀಡುವ ಹೊಂಬಟ್ಟಲು ಸೂರ್ಯ. ಚಿನ್ನದ ಡಾಲರ್ ನಾಳಿನ ತೂತಿಗೆ ಜಾರುತಿದೆ ಎಂದನಂತೆ ನವ್ಯ ಕವಿ! ಸೂರ್ಯನ ಪ್ರತಿಬಿಂಬ ಸಮುದ್ರದಲ್ಲಿ ಕಾಣಲಿಲ್ಲ. ಆದರೆ ಸಮುದ್ರದ ಗೆರೆ ಸೂರ್ಯ ಬಿಂಬವನ್ನು ಕ್ರಮೇಣ ಸೆಳೆಯಿತು. ಹೋಗಿಯೇ ಬಿಟ್ಟಿತು. ಆ ಕೊನೆಯ ಚುಕ್ಕಿಯೂ ಇನ್ನಿಲ್ಲ. 'ಕುರುಕುಲಾರ್ಕನುಮರ್ಕನುಮಸ್ತಮಿಸಿದಂ' ಎಂದು ಹೇಳಿದ ಮಹಾಕವಿಯ ಉಪಮೆ ಎಷ್ಟೊಂದು ಉಚಿತ. ಆಗ ಸಾಯಂಕಾಲ ಮುಗಿಯಿತು.

ಇಂತಹ ಸುಂದರ ಸಾಯಂಕಾಲದಿ
ಜೀವಿಸುವುದಕಿಂತಲು ಬೇರೆಯ ಗುರಿ ಜೀವಕೆ ಬೇಕಿಲ್ಲ
**– ಕುವೆಂಪು ಕ್ಷಮೆ ಕೋರಿ –**

ಸಂಜೆಯಾಯಿತು:

ಒಂದದ ಪಗಲಿರುಳೆರಡರ
ಸಂದುಗಳು ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲ್ದವೊಲೆಸೆದುದು
ಮಂದೈಸಿದ ಸಂಜೆಗೆಂಪು ಪಡುವಣ ದೆಸೆಯೊಳ್
**– ರನ್ನ –**

ಪಡುವಣ ತೆರೆಯಲ್ಲಿ ಶುಕ್ರ, ಬುಧ, ಶನಿ ಒಟ್ಟಾಗಿ ಶಾಂತಿ ಬೀರಿ ನಕ್ಕವು. ಮಹಾವ್ಯಾಧ, ಮಹಾಶ್ವಾನಗಳೊಡಗೂಡಿ ವೃಷಭವನ್ನು ನೀರಿನೆಡೆಗೆ ಅಟ್ಟುವ ಚಿರಂತನ ನಾಟಕ ಆಗ ಪ್ರದರ್ಶಿತವಾಗತೊಡಗಿತು. ಡಯಾನಾ ದೇವಿ (ಚಂದ್ರ) ತನ್ನ ಪ್ರೇಮಿ ಮಹಾವ್ಯಾಧನ ಸಮಾಗಮಕ್ಕಾಗಿ ಮಂದಹಾಸದ ಪ್ರಭೆಯನ್ನು ಸೂಸಿ ಬರುತ್ತಿದ್ದ ಇನ್ನೊಂದು ನಾಟಕವೂ ಸಿದ್ಧವಾಗುತ್ತಿತ್ತು. ಮಿಥುನ ರಾಶಿಯ ಹೊಸ್ತಿಲಲ್ಲಿ ನಿಂತಿದ್ದ ಬೆಳಕಿನ ಉಂಡೆ ಗುರು ಇನ್ನೊಂದು ಅದ್ಭುತ ದೃಶ್ಯ.

ರಜನಿಯಲಿ ಝಗಝಗಿಸುತಿರುವ ನಕ್ಷತ್ರಗಳು
ಸಪ್ತರ್ಷಿಮಂಡಲವು, ವ್ಯಾಧ, ಕೃತ್ತಿಕೆ, ರೋಹಿಣಿ,
ಕ್ಷೀರ ಪಥ ಗುರು ಶುಕ್ರ ಇಲ್ಲಿದೆ ನಭೋಮಂಡಲ
ಇಲ್ಲಿ ನೆರೆದಿಹುದಯ್ಯ ನಕ್ಷತ್ರದಕ್ಷೋಹಿಣಿ
**– ವಿ. ಕೃ. ಗೋಕಾಕ –**

ಉತ್ತರದೆಡೆಗೆ ತಿರುಗಿದರೆ ಅಲ್ಲೊಂದು ಭರತನಾಟ್ಯದ ವಿನ್ಯಾಸವೇ ಪ್ರದರ್ಶಿತವಾಗುತ್ತಿತ್ತು. ಬಲಗಡೆ ಮೂಡುತ್ತಿರುವ ಸಪ್ತರ್ಷಿಮಂಡಲ, ಎಡಗಡೆ ಕಂತುತ್ತಿರುವ ಕುಂತೀ – ಇವೆರಡರ ನಡುವೆ ಇರುವ ಶಾಶ್ವತ ಧ್ರುವ ನಕ್ಷತ್ರಕ್ಕೆ ಚಾಮರ ಬೀಸುವ ಭಂಗಿಯಲ್ಲಿ ನಿಂತಿದ್ದುವು. ಒಂದೊಂದು ಮನೋಹರ ದೃಶ್ಯ ನೋಡಲೂ ವ್ಯಕ್ತಿಯ ಆಯುರ್ಮಾನ ಸಾಲದು. ಆಕಾಶದಿಂದ ಭೂಮಿಗೆ ಇಳಿದರೆ ಅಲ್ಲಿ ಇನ್ನೊಂದು ವಿಧದ ಬೆರಗು ಸಿದ್ಧವಾದಂತ್ತಿತ್ತು. ನಮಗಿಂತ ಕೆಳಮಟ್ಟಗಳಲ್ಲಿ ದೂರ ದೂರದ ಬೆಟ್ಟದ ಸಾಲುಗಳಿಗೆ ಕಾಡು ಬೆಂಕಿ ಬಿದ್ದಿತ್ತು. ಅವುಗಳ ಮೈಮೇಲೆ ವಿಪುಲವಾಗಿ ಬೆಳೆದಿದ್ದ ಹುಲ್ಲಿನ ಬಣಬೆಗಳು ಚಿಟಿಮಿಟಿ ಉರಿದು ಭೀಕರ ಕೆನ್ನಾಲಗೆ ಚಾಚಿದ್ದುವು. ಆ ಕತ್ತಲೆಯಲ್ಲಿಯೂ ಕರಾಳ ಹೊಗೆಯನ್ನು ಆಕಾಶದೆಡೆಗೆ ಕಾರುತ್ತಿದ್ದುದು ಕಾಣುತ್ತಿತ್ತು. ಅಲ್ಲಿ ಪ್ರವಹಿಸುತ್ತಿದ್ದ ಬೆಳಕು ನವರಾತ್ರಿಯ ಮೈಸೂರರಮನೆಯ ವೈಭವಕ್ಕಿಂತ ಮಿಗಿಲು. ಕನ್ನಂಬಾಡಿಯ ಬೆಳಕಿನ ಹೊಳೆ ಇದರ ಮುಂದೆ ಸೂರ್ಯನ ಮುಂದಿನ ಸೊಡರು. 'ಸರಿಯೇ ಸೂರ್ಯಗೆ ಕೋಟಿ ಮಿಂಚುಂಬುಳುಗಳ್?' ಇದು ದೇವರ ದೀಪಾವಳಿ ಕಾಣೋ. ಆ ದೃಶ್ಯ ರುದ್ರ ಮನೋಹರ. ಒಂದು ಕಡೆ ಬೆಂಕಿಯ ಗೆರೆ ಪರ್ವತರಾಜನಿಗೆ ಚಿನ್ನದ ಹಾರ ತೊಡಿಸಿದಂತೆ. ಇನ್ನೊಂದು ಕಡೆ ಪರ್ವತದ ಸುಪ್ತ ಪ್ರೇಮ ಹೃದಯಾಕಾರದಲ್ಲಿ ವ್ಯಕ್ತವಾಗಿತ್ತು. ಮತ್ತೊಂದು ಕಡೆ ಪಲ್ಲಕ್ಕಿಯ ಕಮಾನಿನಂತೆ. ಬೇರೊಂದು ಕಡೆ ದಕ್ಷಿಣ ಭಾರತದ ಸುವರ್ಣ ರೇಖಾಚಿತ್ರ! ಉಳಿದ ಕಡೆ ಆಕಾರರಹಿತ ಆದರೂ ಸಾಕಾರ. ಬೆಂಕಿಯ ನಾಲಗೆ ಬೆಟ್ಟಗಳನ್ನು ನೆಕ್ಕುತ್ತಿತ್ತು. ನಿಜ, ಸಿರಿವಂತರೂ ಬಡವರೂ ಬೀಗವಿಕ್ಕಿರುವ ಎರಡು ಸಂದೂಕಗಳು, ಒಂದರ ಕೀಲಿ ಇನ್ನೊಂದರೊಳಗೆ.

ಎಂಟು ಗಂಟೆಗೆ ನಾವು ಆಶ್ರಮಕ್ಕೆ ಮರಳಿದೆವು. ಪಾಯಸ, ಚಿತ್ರಾನ್ನ, ಕೇಸರಿಬಾತ್, ತಿಳಿಸಾರು, ಸಾಂಬಾರು, ಅನ್ನ, ಚಪಾತಿ – ಸಾಕ್ಷಾತ್ ನಳ, ವಲಲರು ಅಲ್ಲಿ ಸಂಗಮಿಸಿದ್ದರು. ಊಟವಾಯಿತು – ಶಿಬಿರಾಗ್ನಿ. "ಬೆಂಗಳೂರದು, ನಮ್ಮ ಬೆಂಗಾಳೂರದು ಬಲು ದೂಊರಾ..." ಪಿಂಟೋ ಕೆನೆದ. ಚಂದ್ರಶೇಖರ ಬಾಬು ಮಲೆಯಾಳೀ ಹಾಡು ಕಳುಕಿದ, ಕುಣಿದರು, ಕತೆ ಹೇಳಿದರು, ನಕ್ಕು ನಲಿದರು. ಮಲಗುವ ಮುನ್ನ

ಕಾಡು ಮೃಗಗಳಿಂದ ರಕ್ಷಣೆಗಾಗಿ ಸಶಸ್ತ್ರ ಪಹರೆಯನ್ನು ಏರ್ಪಾಡು ಮಾಡಲು ಮರೆಯಲಿಲ್ಲ. ಆದರೆ ಶಸ್ತ್ರಧಾರಿಗಳು ಮಾತ್ರ ಖಾನ್ವಿಲ್ಕರರು. ಪ್ರಭಾಕರ ರೆಡ್ಡಿ ದೊಡ್ಡ ಶಿಕಾರಿಗಾರನಂತೆ. ಬಗೆಬಗೆಯಾಗಿ ಬೇಡಿದ – ರಾತ್ರಿ ಸಂಗಡಿಗರೊಡನೆ ಶಿಕಾರಿಗೆ ಹೋಗಿಬರುವುದಾಗಿ, ರೈಫಲ್ ಕೊಡಬೇಕೆಂದು. "ನನ್ನ ಮುಂದಾಳುತನದಲ್ಲಿ ಅದು ಅಸಾಧ್ಯ – ಬೇಟೆಗೆ ನಾನು ಬದ್ಧ ವೈರಿ" ಎಂದು ಅವನನ್ನು ಹತಾಶೆಗೊಳಿಸಲಾಯಿತು. ಆ ನಿರಪರಾಧಿ ಕಾಟಿಯನ್ನು ನಾವು ಕೊಂದ ದೃಶ್ಯವನ್ನು ಎಂದೂ ಮರೆಯಲಾರೆ.

ಮರುದಿನ ಮಾಮೂಲಿನಂತೆ ೬.೩೦ಕ್ಕೆ ಉಪಾಹಾರ, ೭ಗಂಟೆಗೆ ಹೊರಟೆವು. ಒಂದು ತಂಡ ಬಂಡೆ ಜಾರಲು, ಏರಲು. ಇನ್ನೊಂದು ತಂಡ ಕಾಡು ಅಂಡಲೆಯಲು. ಶಿವಪ್ಪ, ಶೇಣವ, ಡಾಕ್ಟರರು ಎರಡನೆಯವರ ಜೊತೆ ಹೋದರು. ನಾನು ಮೊದಲಿನವರ ಸಂಗಡ ಹೋದೆ. ಊಟದ ಹೊತ್ತಿಗೆ ನಾವು ಮರಳಬೇಕು. ಊಟವಾದನಂತರ ತಂಡಗಳ ಬದಲಾವಣೆ. ಇದು ಕಾರ್ಯಕ್ರಮ.

ಅದೃಷ್ಟವಶಾತ್ ನಮಗೆ ಅನುಕೂಲವಾದ ಸ್ಥಳ ಬೇಗನೆ ದೊರೆಯಿತು. ಅಲ್ಲಿ ಕುದುರೆಮುಖದ ಶ್ರೇಣಿ ಫಕ್ಕನೆ ಕೊನೆಗೊಂಡು ಕೆಳಕ್ಕೆ ಸುಮಾರು ೫೦ ಅಡಿ ಆಳದ ನೆಗೆತ. ಬಳಸಿಕೊಂಡು ಹೋಗಿ ಅದರ ತಳ ಸೇರಬಹುದು. ತಳದಿಂದ ಸೀದಾ ಮೇಲೆ ಏರಲು ಸಾಧ್ಯವಾಗುವಂಥ ಒಂದು ಕಡಿದಾದ ಕೊರಕಲೂ (ಚಿಮ್ನಿಯಂತೆ) ಅಲ್ಲಿಯೇ ಇತ್ತು. ಹೀಗಾಗಿ ಇದೊಂದೇ ಸ್ಥಳದಲ್ಲಿ ನಮಗೆ ಬಂಡೆ ಏರುವುದು, ಜಿಗಿಯುವುದು ಎರಡನ್ನೂ ಮಾಡಲು ಸಾಧ್ಯವಿತ್ತು. ಆದರೆ ೫೦ ಅಡಿ ಆಳ ಜಿಗಿಯಲು ನಿಲ್ಲುವ ವೇದಿಕೆ (ಅಂದರೆ ಪ್ರಪಾತದ ಅಂಚು) ನೆಲದಿಂದ ಸ್ವಲ್ಪ ಹೊರಕ್ಕೆ ಚಾಚಿರುವುದರಿಂದ ಅಲ್ಲಿಗೆ ಸಕಲ ರಕ್ಷಣಾಪೂರ್ವಕವಾಗಿಯೇ ಹೋಗಿ ನಿಂತಾಗ ಎಂಥ ಗಂಡೆದೆಯೂ ಒಂದು ಸಲ ಹಿಂದೆ ಮುಂದೆ ಯೋಚಿಸುವಂತಿತ್ತು. ಲಕ್ಷ್ಮಿ, ಮೋಹನರು ಇಲ್ಲಿ ಕುಪ್ಪಳಿಸಿ ನೆಗೆದು ಭದ್ರವಾಗಿದೆ ಎಂದರು. ಪಿಂಟೋ ಮೇಲುಗಡೆ ಕುಳಿತು, ಜಿಗಿವವರನ್ನು ಬಿಲೇ ಮಾಡುತ್ತಿದ್ದ. ಅವನ ಬಳಿಯಲ್ಲೇ ಲಕ್ಷ್ಮಿ ಕುಳಿತು ಚಿಮ್ನಿ ಕಲ್ಲನ್ನೇರುವವರನ್ನು ಬಿಲೇ ಮಾಡುತ್ತಿದ್ದ. ಇವರ ಸಹಾಯಕ್ಕೆ ಬೇರೆ ಇಬ್ಬರನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕೂರಿಸಿ ಸುಬೇದಾರ್ ಖಾನ್ವಿಲ್ಕರರನ್ನು ಅಲ್ಲಿ ಉಸ್ತುವಾರಿಕೆಗೆ ಬಿಟ್ಟು ನಾನು ಕೆಳಗೆ ಬಂದೆ. ಮೊದಲು ಒಬ್ಬ ಜಿಗಿಯಬೇಕು. ಹೀಗೆ ಕೆಳಗೆ ಬಂದಾತ ಚಿಮ್ನಿಯ ಮೂಲಕ ಮೇಲೇರಿ ಹೋಗಬೇಕು. ಸಂಶಯಾತ್ಮರು (ವಿನಶ್ಯತೀ) ಈ ಯಾವುದನ್ನೂ ಮಾಡಬಾರದೆಂದು ಕಡ್ಡಾಯವಾಗಿ ವಿಧಿಸಿದೆ. ಇದುವರೆಗಿನ ನಮ್ಮ ಎಲ್ಲ ಸಾಹಸಗಳಿಗಿಂತಲೂ ಇದು ಹೆಚ್ಚು ಅಪಾಯಕಾರಿಯಾದದ್ದು. ಮೂರು ನಾಲ್ಕು ಜನ ಸರಿಯಾಗಿಯೇ ಮಾಡಿದರು. ಆದ್ದರಿಂದ ಧೈರ್ಯ ಬಂದಿತು ಇತರರಿಗೆ. ನನಗೆ ಸಹ. ನಾನೂ ಹೊರಟೆ. ಪ್ರಪಾತದ ಅಂಚಿಗೆ ಬಂದಾಗ ಎದೆ ನಡುಗಿತು. ಮೈಬೆವರಿತು. ಕಾರಣ ಏನೂ ಇಲ್ಲ. ಹಿಂದೆ ಹಾರಿದ್ದೇನೆ. ಆದರೆ ಇಂಥ ಆಳವನ್ನಲ್ಲ. ಆದರೂ ಮಾನ, ಪ್ರತಿಷ್ಠೆ ಇವೆಯಲ್ಲ. ಹೊರಟಮೇಲೆ ಆದದ್ದಾಗಲಿ, ಪ್ರಾಣ ಭಯವಿಲ್ಲ ಎಂದು ಜಿಗಿದೇ ಬಿಟ್ಟೆ. ಜಿಗಿದ ಕೋನ ಸರಿಯಾಗಲಿಲ್ಲ. ಸಮತೋಲ ತಪ್ಪಿತು. ಇಡೀ ದೇಹ ಬಲಗಡೆಗೆ ಲೋಲಕದಂತೆ ತೂಗಾಡಿ ಬಡಿಯಿತು. ಕಾಲು ಚಾಚಿದ್ದುದರಿಂದ ಅಲ್ಲಿ ನಿಂತೆ. ಇದನ್ನು ನೋಡುತ್ತಿದ್ದ ನನ್ನ ಭಾವ ಶಂಕರ "ಇದು ಭಯಂಕರ" ಎಂದು ಉದ್ಗರಿಸಿದ. (ಅಕ್ಕನ ಚಿಂತೆ?) ನನ್ನ ತಪ್ಪಿನಿಂದ ಭಯಂಕರವಾಯಿತಷ್ಟೆ. ಮತ್ತೆ ಸರಿಯಾಗಿ ನಿಂತು ಜಿಗಿದೆ. ಸರಿಯಾಗಿಯೇ ಕೆಳಗೆ ಬಂದೆ. ಸದ್ಯ, ಮರ್ಯಾದೆ ಉಳಿಯಿತು. ಚಿಮ್ನಿ ಏರಲು ನಾನು ಹೊರಡಲಿಲ್ಲ. ಐದಡಿ ಹತ್ತಿದ ಅನಂತರಾಜು ಕುಸಿದುಬಿದ್ದ. ಬಿಲೇ ಇದ್ದುದರಿಂದ ತೊಂದರೆ ಆಗಲಿಲ್ಲ. ಹತ್ತಡಿ ಹತ್ತಿದ ನಾಗರಾಜ ಸಾಧ್ಯವಿಲ್ಲ ಎಂದು ಕೆಳಗಿಳಿದ. ನಮ್ಮ ಮಾತುಭಾರೀ ಜಗನ್ನಾಥ ಶಾಸ್ತ್ರಿ, "ನಾನು ನೋಡಿ ಸಾರ್, ಬೆಸ್ಟ್ ಡೆಮೋನ್ಸ್ಟ್ರೇಷನ್ ಕೊಟ್ಟೇ ಬಿಡುತ್ತೇನೆ" ಎಂದ.
"ಅದು ಮಾತಾಡಿದಷ್ಟು ಸುಲಭ ಅಲ್ಲ" ನಾನೆಂದೆ.
"ನಿಂಗಾಗೋದಿಲ್ಲ ಕಣೋ" ಲಕ್ಷ್ಮಿ ರೇಗಿಸಿದ.
ಶಾಸ್ತ್ರಿ ಏರಿಯೇ ಬಿಟ್ಟ. ಲಕ್ಷ್ಮಿ ಮೇಲಿನಿಂದ (ಇವನಿಗೆ ಏರುತ್ತಿರುವವನನ್ನು ಕಾಣುವುದಿಲ್ಲ. ಹಗ್ಗದ ಹಿಡಿತದಿಂದ ಏರುವವನನ್ನು ನಿಯಂತ್ರಿಸಬೇಕು) ಬಿಲೇ ಹಿಡಿದಿದ್ದ. ಶಾಸ್ತ್ರಿ ಮಾತು ಆಡುತ್ತಲೇ ಗಲಭೆ ಮಾಡುತ್ತಲೇ ಏರತೊಡಗಿದ. ನಾನು ಹೇಳಿದೆ, "ಏಕಾಗ್ರತೆಯಿಂದ ಏರಪ್ಪ, ಬೇರೆ ಕಡೆ ಗಮನವೀಯಬೇಡ."
೧೦–೧೨ ಅಡಿ ಏರಿರಬಹುದು, "ಸಾರ್, ಸಾರ್! ನಾಳೆ ದಿವಸದ ಪ್ರೋಗ್ರಾಮ್ ಏನು?" ನನ್ನ ಕಡೆಗೆ ತಿರುಗಿ ಕೇಳಿದ. ಹಿಡಿದ ಕಲ್ಲಿನ ಹಿಡಿತ ತಪ್ಪಿತು. "ಓ ಬಿದ್ದೇ ಬಿದ್ದೇ" ಎಂದು ಚೀತ್ಕರಿಸಿ ಧಿಡೀರನೆ ನೆಗೆದೇ ಬಿಟ್ಟ. ಯಾವ ಬಿಲೇ ಹಗ್ಗವೂ ಎಂಥ ಬಿಲೇಕಾರನೂ ಇಂಥ ಹುಚ್ಚು ನೆಗೆತವನ್ನು ನಿಯಂತ್ರಿಸುವುದು ಸಾಧ್ಯವಿಲ್ಲ. ಪ್ರತಿಯೊಬ್ಬನೂ ಅವನವನ ಪಾಲಿನ ಕರ್ತವ್ಯವನ್ನು ಶಿಸ್ತಿನಿಂದ ನಿರ್ವಹಿಸಲೆಂದೇ ಅವರಿಗೆ ಪೂರ್ವ ಶಿಕ್ಷಣವಿತ್ತು ಇಂಥಲ್ಲಿಗೆ ಕರೆದುಕೊಂಡು ಹೋಗುವುದು. ಆದರೂ ಪ್ರಾಯದ ಪ್ರಭಾವ, ನರನನ್ನು ಮೀರಿಸಿದ ವಾನರ. ಆ ದುರ್ಧರ ಪ್ರಸಂಗದಲ್ಲಿ ಮೂರು ಭೀಕರ ದುರಂತಗಳು ಸಂಭವಿಸದೇ ಇದ್ದದ್ದು ಪವಾಡವೆಂದು, ಅದೃಷ್ಟವೆಂದು ತಿಳಿದಿದ್ದೇನೆ. ಬಿದ್ದ ಶಾಸ್ತ್ರಿಗೆ ಎದೆಗೋ ತಲೆಗೋ ಬಲವಾಗಿ ಪೆಟ್ಟಾಗಬಹುದಿತ್ತು. ಅದೇ ಗಳಿಗೆಯಲ್ಲಿ ನಿರಪರಾಧಿ ತಿಮ್ಮಪ್ಪ ಅಲ್ಲೇ ಅಡ್ಡ ದಾಟುತ್ತಿದ್ದ. ಅವನ ತಲೆಯ ಮೇಲೆ ಹಠಾತ್ತಾಗಿ ಈ ಕಲ್ಲುಗುಂಡು ಶಾಸ್ತ್ರಿ ಕೆಡೆದ. ಒಂಡೆರಡು ಗಂಟೆ ಹೊತ್ತು ತಿಮ್ಮಪ್ಪ ನೋವಿನ ಬಾಧೆಯಿಂದ ನರಳುತ್ತಿದ್ದ. ಅವನಿಗೂ ಅಪಾಯ ಸಂಭವಿಸದೇ ಇದ್ದದ್ದು ಅದೃಷ್ಟ. ಇನ್ನು ಬಿಲೇ ಮಾಡಲು ಕುಳಿತಿದ್ದ ಸಾಕ್ಷಾತ್ Chief Instructor ಹಿಮಾಲಯದ ಕಲಿ ಲಕ್ಷ್ಮೀನಾರಾಯಣ ಬಿಲೇ ಹಗ್ಗವನ್ನು ತನ್ನ ಹೆಗಲಿಗಾಗಿ ಸುತ್ತಿ ಅದರ ಕೊನೆಯನ್ನು ಹಿಂದೆ ಇಳಿಬಿಟ್ಟಿದ್ದ. ಹಿಂದೆ ಯಾರೂ ಹಿಡಿದಿತ್ತಿಲ್ಲ; ಇವನು ಬೇಡವೆಂದು ಹೇಳಿದ್ದನಂತೆ! ಶಾಸ್ತ್ರಿ ದುಮುಕಿದ್ದು ಹಠಾತ್ತನೆ. ಆ ಜಗ್ಗಿನಿಂದ ಬಿಲೇ ಹಗ್ಗ ಲಕ್ಷ್ಮಿಗೆ ಯಮಪಾಶದಂತೆ ಸುತ್ತಿ

(ಜಾರದೇ) ಅವನನ್ನು ಗಾಳಿಗೆ ಸಿಕ್ಕ ತರಗೆಲೆಯಂತೆ ಎಳೆದುಬಿಟ್ಟಿತು. ಅವನು ಕುಳಿತಿದ್ದದ್ದು ಪ್ರಪಾತದ ಅಂಚಿನಿಂದ ಕೇವಲ ಎರಡಡಿ ಹಿಂದೆ. ಹುಡುಗ ಬುದ್ಧಿವಂತನೋ ಅಲ್ಲವೋ ಅವನು ಹಿಡಿತ ಬಿಟ್ಟು ಕೈಕಾಲು ಚಾಚಿ ನೆಲದಮೇಲೆ ಹೊರಳಿಬಿಟ್ಟ. ಲಕ್ಷ್ಮಿಯ ತಲೆ ಪ್ರಪಾತದಂಚಿನಲ್ಲಿ ನೆಲಕ್ಕೆ ಅಪ್ಪಳಿಸಿದ್ದು ಕೆಳಗಿನಿಂದ ನನಗೆ ಕಂಡಿತು. ಇನ್ನೊಂದಡಿ ಮುಂಡೆ ಬಂದಿದ್ದರೆ ಅವನು ೫೦ ಅಡಿ ಕೆಳಗೆ. ಆದರೆ ಅಷ್ಟರಲ್ಲಿಯೇ ಶಾಸ್ತ್ರಿ ನೆಲ ಸೇರಿದ್ದರಿಂದ ಲಕ್ಷ್ಮಿ ಬಚಾವ್. "ಬಂಡೆಯೊಡನೆ ಸೆಣಸಬೇಡಿ ಮಂಡೆಗಟ್ಟಿಗರೇ ಮಂಡೆಗೆಟ್ಟವರೇ ಭಂಡ ಗಂಡುಗಳೇ!"
ಆ ಕ್ಷಣವೇ ನಾನು ಚಿಮ್ನಿಯನ್ನು ನಿಲ್ಲಿಸಿದೆ.

ಸಂಜೆ ಪುನಃ ಸೂರ್ಯಾಸ್ತಮಾನ ವೀಕ್ಷಣೆ. ಹೊಸ ನಾಟಕ. ನಿತ್ಯನೂತನತೆಯೇ ನಿಸರ್ಗದ ರಹಸ್ಯ – ನವನವೋನ್ಮೇಷಶಾಲಿನಿ. ನಾವು ಹಿಂತಿರುಗಿ ಹೋದಾಗ ಬಂಡೆಕಲ್ಲಿನ ಮೇಲೆ ಮೋಹನ ಅಂಗಾತ ಬಿದ್ದುಬಿಟ್ಟಿದ್ದಾನೆ. ಕೈಕಾಲು ಎಲ್ಲ ಕೊರಡಿನಂತೆ. ಕಣ್ಣುಗಳು ಮುಚ್ಚಿಹೋಗಿವೆ. ಬಾಯಿಯಿಂದ ನೊರೆ ಬರುತ್ತಿದೆ. ಅಪಸ್ಮಾರ? ಹುಡುಗರು ಸುತ್ತಲೂ ಸೇರಿದ್ದಾರೆ. ಗಾಳಿ ಹಾಕಿದರು ಕೆಲವರು. "ಇದು ಆಟ, ನಿಜವಲ್ಲ" ಎಂದರು ಬೇರಿಬ್ಬರು.
ನಾನೆಂದೆ, "ಮೋಹನಾ! ಇದು ಆಟವಾದರೆ ಭಯಂಕರವಾದ ಆಟ. ಇದನ್ನು ಆಡಬಾರದು. ಅದೂ ಇಂಥ ಸ್ಥಳದಲ್ಲಿ ಖಂಡಿತವಾಗಿಯೂ ಆಡತಕ್ಕದ್ದಲ್ಲ. ಎದ್ದು ಬಿಡು ಸಾಕು. ನನಗೆ ಭಯವಾಗಿದೆ."
ಮೋಹನ ಏಳಲಿಲ್ಲ. ಮೊಸಳೆ ಬಂದ ಕತೆಯೇ? ಆಟ ವಾಸ್ತವವಾಯಿತೇ? ಸ್ವಲ್ಪ ಹಿಂದಿನಿಂದ ಬರುತ್ತಿದ್ದ ಡಾಕ್ಟರರಿಗೆ ತ್ವರೆಯಾಗಿ ಬರಲು ಹೇಳಿಕಳಿಸಲಾಯ್ತು. ಮೋಹನ ಯಥಾಸ್ಥಿತಿ. ಡಾಕ್ಟರರು ಬಂದರು. ಕಣ್ಣು ರೆಪ್ಪೆ ಅಗಲಿಸಿ ನೋಡಿದರು.
"ಇನ್ನು ಮುಂದೆ ಈ ಹುಚ್ಚುಬೇಡ. ಏಳು" ಎಂದು ಬಾರು ಕೋಲಿನಿಂದ ಬೆನ್ನಿಗೆರಡು ಬಾರಿಸಿದರು. ಚಂಗನೆ ನೆಗೆದ. ಮೋಹನ ಸರಿಯಾದ. ಬಾಯಿಗೆ ಟೂತ್ಪೇಸ್ಟ್ ಹಾಕಿ ನೊರೆ ಬರಿಸಿದ್ದಂತೆ. ನಾನವನನ್ನು ಚೆನ್ನಾಗಿ ಥಳಿಸಿದೆ.

ಮರುದಿನ, ಅಂದರೆ ಮೂರನೆಯ ದಿನ, ಬೆಟ್ಟ ಕಾಡುಗಳ ಹಿಂದಿನಿಂದ ಸೂರ್ಯೋದಯವಾಗುವುದನ್ನು ನೋಡಲು ಶಿಖರಕ್ಕೆ ಧಾವಿಸಿದೆವು. ಚಿನ್ನದ ಡಾಲರ್ ಅಲ್ಲಿ ಮೇಲೇರಿ ಬರುವುದು ಇನ್ನೊಂದು ಮನೋಹರ ದೃಶ್ಯ. ಆ ಬೆಳಗ್ಗೆ ಅವರವರ ಮನ ಬಂದಂತೆ ಐದೈದು ಜನರ ಗುಂಪಾಗಿ ಅಡ್ಡಾಡಿ ಬರಲು ಸ್ವಾತಂತ್ರ್ಯವಿತ್ತೆ. ಶಿವಪ್ಪ, ಗೌರೀಶಂಕರ ಉಪಾಹಾರವಾದೊಡನೆ ಒಬ್ಬ ಶೆರ್ಪಾ ಜೊತೆ ನಾವೂರಿಗೆ ಹಿಂತಿರುಗಿದರು. ಮೆಂಗಿಲ ಶೇಣವನ ಜೊತೆಯಲ್ಲಿ ನಾನೊಬ್ಬನೇ ಹೊರಟೆ. ಡಾಕ್ಟರರೂ ಖಾನ್ವಿಲ್ಕರರೂ ಪರ್ಣಕುಟೀರದಲ್ಲಿ ಬೇರೆ ಹುಡುಗರೊಡನೆ ಆಡುತ್ತ ಹರಟುತ್ತ ಕುಳಿತರು. ಕುದುರೆಮುಖದ ಗೊಂಡಾರಣ್ಯದೊಳಕ್ಕೆ ನಾನೂ ಶೇಣವನೂ ಹೊಕ್ಕೆವು. ಸಾಲಾಗಿ ನಿಂತಿರುವ ತಳವಾರರಂಥ ಮರಗಾಡು. ಅದರಲ್ಲಿ ಪೊದೆಯಿಲ್ಲ. ಕುರುಚಲು ಇಲ್ಲ. ಹೀಗಾಗಿ ಯಾವ ಕಡೆಗೆ ಬೇಕಾದರೂ ಅಲೆಯುವ ಸೌಕರ್ಯವಿತ್ತು. ಅದರೊಳಗೆ ಸೂರ್ಯನ ಬಿಸಿಲು ಧಗೆ ಪ್ರವೇಶಿಸುವಂತೆಯೇ ಇಲ್ಲ. ನಮ್ಮ ನಡಿಗೆ ವಾಸನೆಗಳಿಗೆ ಹೆದರಿದ ಯಾವುದೋ ಪ್ರಾಣಿಗಳು ಧಡಧಡನೆ ಧಾವಿಸಿದ ಸದ್ದು ಮಾತ್ರ ನಮಗೆ ಕೇಳಿಸಿತು. ಕಾಡಿನ ಒಂದು ಅಂಚಿನಲ್ಲಿ ಬಂಡೆಗಳ ಮೇಲೆ ದುಮುಕುವ ಜಲಪಾತ; ನೈಸರ್ಗಿಕ ಕಾಮನಬಿಲ್ಲು, "ತೆಕ್ಕನೆ ಮೈಮನ ಮರೆ'ಸುವಂಥ ದೃಶ್ಯ. ಕಾಡನ್ನು ಸುತ್ತಿ ಬೆಟ್ಟದ ಇನ್ನೊಂದು ಮಗ್ಗುಲಿಗೆ ಬಂದರೆ ನಾವು ಕುದುರೆಮುಖದ ಜೊತೆಗಾರನಾದ ಗೋಮುಖದ (೬೧೭೭ ಅಡಿ) ಮೇಲಿದ್ದೇವೆ. ಇವೆರಡರ ಮಧ್ಯೆ ಇರುವ ಇನ್ನೊಂದು ಶಿಖರ ಗುಂಡುಕಲ್ಲು (೬೧೦೦ ಅಡಿ). ಕುದುರೆಮುಖ, ಗುಂಡುಕಲ್ಲು, ಗೋಮುಖ ಸಾಲಾಗಿ ದಕ್ಷಿಣ–ಪಶ್ಚಿಮ ದಿಕ್ಕಿಗೆ ಮುಖಮಾಡಿ ನಿಂತಿರುವ ಶಿಖರಗಳು. ನಾವೂರು ಕಡೆಯಿಂದ ಬರುವಾಗ ಅತಿ ಸಮೀಪದ ಅತಿ ಎತ್ತರದ ಕುದುರೆಮುಖ ಮೊದಲು ಕಾಣುವುದರಿಂದ ಉಳಿದ ಶಿಖರಗಳು ಅಲ್ಲಿಗೆ ಅದೃಶ್ಯ.

ಕುದುರೆಮುಖದ ಕೆಳಗೆ ಬೋಳು ಬೆಟ್ಟಗಳ ರಾಶಿ, ಬಯಲು ಸೀಮೆ. ಆದರೆ ಗೋಮುಖದ ಕೆಳಗಿನ ದೃಶ್ಯ ಲಕ್ಷಾಂತರ ನವಪಲ್ಲವ ಖಚಿತ ವೃಕ್ಷರಾಶಿ, ಒಂದರ ಮೇಲೊಂದು ಬಿದ್ದಂತೆ. ಆ ಚಿಗುರುಗಳ ವರ್ಣವೈವಿಧ್ಯ, ಪರ್ಣ ಸೌರಭ್ಯ, ನೊರೆನೊರೆಯಾಗಿ ಕುಸುರು ಕುಸುರಾಗಿ ಮೊಸರುಗಡಲಿನ ಬೆಣ್ಣೆಯಂತೆ ತೇಲಿಬರುವ ರಮಣೀಯ ದೃಶ್ಯ ಇನ್ನೊಂದು ಮರೆಯಲಾಗದ ಅನುಭವ. ಸೃಷ್ಟಿಕರ್ತ ಅತಿ ಸುಂದರ ವಿಶಾಲರತ್ನಗಂಬಳಿಯನ್ನು ಅಲ್ಲಿ ಆಚ್ಛಾದಿಸಿದಂತೆ ಇತ್ತು.

೧೨ ಗಂಟೆ ಮಧ್ಯಾಹ್ನ ಊಟ ಮುಗಿಸಿ ಹಿಂದೆ ಹೊರಡುವುದು ನಮ್ಮ ಕಾರ್ಯಕ್ರಮ. ನಾನು ಹಿಂತಿರುಗಿ ಬರುವುದನ್ನು ಎಲ್ಲರೂ ಕಾತರರಾಗಿ ಕಾಯುತ್ತಿದ್ದರು. ವ್ಯಕ್ತ ಸಂತೋಷ ಅವರ ಮುಖದ ಮೇಲೆ ಲಾಸ್ಯವಾಡಿತು.
ಡಾಕ್ಟರರೆಂದರು, "ಮತ್ತೇನಾಯಿತು?"
"ಏನು?" ನಾನೆಂದೆ.
"ಅದೇ ನೀವು ಕೂಗಿದರಲ್ಲ?"
"ಇಲ್ಲವಲ್ಲ!?"
"ತಮಾಷೆ ಮಾಡಬೇಡಿ, ಸಾರ್" ಡಾಕ್ಟರರು.

"ಡಾಕ್ಟ್ರೇ! ನಿನ್ನೆ ರಾತ್ರಿ ಮೋಹನನ ತಮಾಷೆ ನೋಡಿ ಹೆದ್ರಿ ಹೋದೆ. ಅದಕ್ಕೆ ಮೊದಲು ಲಕ್ಷ್ಮಿಯ ತಮಾಷೆಯೂ ನನ್ನನ್ನು ಅಲುಗಿಸಿತು. ಇನ್ನು ನಾನೇ ಮಾಡುವೆನೇ? ಈಗ ಮಾಡುತ್ತಿರುವವರು ನೀವು" ನನಗೆ ಸಮಸ್ಯೆ.
"ಅಲ್ಲ ಸರ್, ಬೈಸನ್ ಏನಾದರೂ!"
"ಹತ್ತು ವರ್ಷಗಳ ಹಿಂದೆ."
"ಅಲ್ಲ, ಇವತ್ತು?"
"ಹೌದು".
"ಅದೇ ನಾವು ಹೇಳುತ್ತಿರುವುದು!"
"ಹೌದು, ಅದರ ಲದ್ದಿ ಕಂಡೆ!"
"ಅಲ್ಲ ಸರ್, ನಿಮ್ಮ ಮೇಲೇನಾದರೂ?"
"ಹೌದು ಏರಿ ಬಂತು."
"ಅದೇ ನಾವು ಹೇಳುತ್ತಿರುವುದು, ಮತ್ತೇನಾಯತು?"
"ಈ ಭೀಕರ ಕಾನನಾಂತರದೊಳ್ ನಾನುಂ ಮೇಣ್ ಮೆಂಗಿಲ ಶೇಣವನುಂ ಪೋಗುತ್ತಿರ್ಪಾ ಸಮಯದೊಳ್ ಕೂರ್ಗಣೆಯಂತೆ ಎತ್ತಣಿಂದಲೋ ಬಂದು ಫಕ್ಕನೆ ಮೇಲೆರಗಿದುದ್ಯೆ. . ."
"ಏನು, ಏನು?"
"ಒಂದು ದೊಡ್ಡ ಸೊಳ್ಳೆ!"
ಎಲ್ಲರೂ ನಕ್ಕರು. ಏನು ಕತೆ ಎಂದು ಡಾಕ್ಟರರನ್ನು ಕೇಳಿದಾಗ ಅವರೆಂದರು, "ನೀವು ಕಾಡಿನೊಳಗೆ ನುಗ್ಗಿ ಹೋದ ಸ್ವಲ್ಪ ಹೊತ್ತಿನ ಬಳಿಕ ಅದೇ ದಿಕ್ಕಿನಿಂದ ನಿಮ್ಮ ಸ್ವರ ಕೇಳಿಸಿತು "Bison, bison help, help" ಎಂದು. ಖಾನ್ವಿಲ್ಕರ್, ನಾನು ಬೇರೆ ಹುಡುಗರು ಎಲ್ಲರೂ ಕೇಳಿ ನಡುಗಿದೆವು. ರೈಫಲ್ ಹಿಡಿದರು ಖಾನ್ವಿಲ್ಕರ್. ನಾವೆಲ್ಲರೂ ಅವರ ಹಿಂದೆ ಬೊಬ್ಬೆ ಹೊಡೆಯುತ್ತ ಓಡಿದೆವು. ಕಾಡೆಲ್ಲ ಅಲೆದೆವು. ನಿಮ್ಮ ಹೆಸರನ್ನೂ ಶೇಣವನ ಹೆಸರನ್ನೂ ಕೂಗಿ ಕರೆದೆವು. ಎಲ್ಲಿಯೂ ಸುದ್ದಿಯಿಲ್ಲ, ಸದ್ದಿಲ್ಲ. ದಿಗ್ಭ್ರಮೆಗೊಂಡ ನಾವು ಈಗ ತಾನೆ ಮರಳಿದೆವು."
ಮುಂದೆ ವಿಚಾರಿಸಿದಾಗ ಸತ್ಯ ಸಂಗತಿ ತಿಳಿಯಿತು. ಗುರು, ವಾಸು, ಶ್ರೀನಿವಾಸ, ಶಾಸ್ತ್ರಿ ಆಡಿದ ಆಟ ಇದು. ನನ್ನ ಸ್ವರವನ್ನು ಯಶಸ್ವಿಯಾಗಿ ಅನುಕರಿಸಿದ್ದರು. ಮೋಹನನ್ನು ಪ್ರೀತಿಯಿಂದ ಥಳಿಸಿದಂತೆ ಇವರಿಗೂ ಸಹಸ್ರನಾಮಾರ್ಚನೆ ಮಾಡಿದೆ! ಅಪಾಯಕಾರಿ ಪ್ರಾಯೋಗಿಕ ತಮಾಷೆಯನ್ನು ಅಂಥ ಸನ್ನಿವೇಶಗಳಲ್ಲಿ ಪ್ರದರ್ಶಿಸಲೇಬಾರದು.

# ಅವರೋಹಣ ಪರ್ವ

## ಅಧ್ಯಾಯ ಇಪ್ಪತ್ತಾರು

ಹನ್ನೆರಡು ಗಂಟೆಗೆ ನಾವು ಕುದುರೆಮುಖದ ಕೊನೆಯೂಟ ಮುಗಿಸಿದೆವು.

ಮಲಗು ಮಗುವೆ! ಮಲಗು
ಕುದುರೆಮೊಗವೆ
ಅಲುಗದಿರು ಅಗಲದಿರು ಇ–
ನ್ನೊಮ್ಮೆ ಬರುವವರೆಗೆ

ಎಂದು ಸಾಮೂಹಿಕ ಗಾನ ಹಾಡಿದೆವು. ಮತ್ತೆ ಅವರೋಹಣ, ಕಡಿಮೆ ಭಾರ. ನ್ಯೂಟನ್ನನ ಸಹಕಾರ, ಸಾಯಂಕಾಲದ ೬ ಗಂಟೆಗೆ ಮೊದಲೇ ನಾವೂರು ಬಂಗ್ಲೆಯ ಸರಹದ್ದು ತಲಪಿದೆವು. ಇಳಿಯುವಾಗಲೂ ಗಂಟೆ ಗಂಟೆಗೆ ಟೀ ತಿಂಡಿಗಳ ಸಮಾರಾಧನೆ, "ಇನ್ನು ಬೇಡ ನಮಗೆ" ಎಂದು ಹುಡುಗರು ಹೇಳುವವರೆಗೂ ಸರದಿ.

ನಾವೂರು ಬಂಗ್ಲೆ ಸಮೀಪವಾದಂತೆ ಕುಶಾಲುತೋಪು ಹೊಟ್ಟಿಸಿದೆವು. ಹೊಗೆ ಬಾಂಬು ಎಸೆದೆವು. ಜಯಕಾರ ಕೂಗಿದೆವು. ನಮ್ಮ ಗೂಡ್ಸ್ ಬಂಡಿಯೀಗ ಏರೋಪ್ಲೇನ್ ವೇಗದಲ್ಲಿ ಮನ್ನುಗ್ಗುತ್ತಿದ್ದುದರಿಂದ ಲೈನು ಮುರಿಯಿತು. ಹಿಂದೆ ಇದ್ದ ನಾನು ಲಗುಬಗೆಯಿಂದ ಕಾಲು ಚಾಚಿ ನಡೆಯುತ್ತಿದ್ದೆ. ಶಿಬಿರ ಸೇರಿದ ಮೇಲೆ ಹುಡುಗರ ಲೆಕ್ಕ ತೆಗೆದುಕೊಳ್ಳಬೇಕಷ್ಟೆ. ಆಗಲೇ ನನ್ನ ಬೆನ್ನನ್ನು ವಿಶ್ವಾಸದಿಂದ ತಡವಿ, "ಅಭಿನಂದನೆಗಳು. ಬಹಳ ಸಂತೋಷ" ಎಂದರು. ಹಿಂತಿರುಗಿ ನೋಡುತ್ತೇನೆ: ಸಾಕ್ಷಾತ್ ದೊರೆಗಳು ಅವತರಿಸಿದ್ದರು! ಅವರ ವಿಶ್ವಾಸದ, ಪ್ರೇಮದ ವಿದ್ಯುದಾಲಿಂಗನದಲ್ಲಿ ನಾವೆಲ್ಲರೂ ಅಯಸ್ಕಾಂತಗಳಾಗಿ ಎಲ್ಲರನ್ನೂ ಆಕರ್ಷಿಸಿದೆವು.



“ಬೆಂಗಳೂರಿಗೆ ಹೋದೆ, ನಿದ್ರೆ ಬರಲಿಲ್ಲ. ತಂದೆಯವರನ್ನು ಪುನಃ ಕೇಳಿದೆ. ‘ಹೋಗಿ ಅವರ ಜೊತೆಯಲ್ಲಿ ತಿರುಗಿ ಬಾ. ಅಲ್ಲಿವರೆಗೂ ನನಗೇನೂ ಆಗುವುದಿಲ್ಲ’ ಎಂದರು. ಬಂದುಬಿಟ್ಟೆ. ನಿಮ್ಮ ಗುರುರಾಜರಾಯರೂ ಬಂದಿದ್ದಾರೆ, ನೋಡಿ ಅವರಿಗೆಷ್ಟು ಪ್ರೇಮ ಹುಡುಗರ ಮೇಲೆ.”

ಕರ್ತವ್ಯ, ಸ್ವಹಿತ ಇವುಗಳ ನಡುವೆ ಪೈಪೋಟಿ ಉಂಟಾದಾಗ ಕರ್ತವ್ಯದ ಕಠಿಣ ಮಾರ್ಗ ಅನುಸರಿಸುವುದರಿಂದ ಮಾತ್ರ ಮಹಾಕಾರ್ಯ ಸಾಧ್ಯ. ಅವರೇ ನಿಜವಾದ ಧುರೀಣರು. ಅವರು ಬಂದುದರಿಂದ ಅಭಿಮಾನದ ಸೌಧಕ್ಕೆ ಗೋಪುರವಿಟ್ಟಂತಾಯಿತು. ಅವರೊಡನೆ ಪ್ರೊ. ಗುರುರಾಜರಾಯರು ಬಂದದ್ದು, ಪ್ರಿನ್ಸಿಪಾಲ್ ಉಮರ್ಜಿಯವರ ಶುಭಾಶಯ ತಂದದ್ದು ನಮಗೆ ಬಲು ಹೆಮ್ಮೆಯ ಮತ್ತು ಸಂತಸದ ಸಂಗತಿ.

ನಿಸಾರ್ ಮತ್ತು ಸ್ವಾಮಿ – ನಾವೂರಾಧಿಪತಿಗಳು ನಮ್ಮ ವಿಶಿಷ್ಟಾವಶ್ಯಕತೆಗಳನ್ನೂ ಪೂರೈಸಿದ್ದರು. ಇಂಥ ಒಂದು ಸಾಹಸದಲ್ಲಿ ಎಲ್ಲರಿಗೂ ಶಿಖರ ಸೇರುವುದು ಸಾಧ್ಯವಿಲ್ಲ. ಬೇರೆ ಹೊಣೆಗಾರಿಕೆ ಹೊತ್ತವರು ಅವುಗಳಿಂದ ಬಂಧಿತರಾಗಿ ನಿಲ್ಲಬೇಕಾಗುತ್ತದೆ. ಮೇಲೆ ಬಂದು, ನಮಗಿಂತೆಲ್ಲ ಚೆನ್ನಾಗಿ ಸೃಷ್ಟಿ ಸೌಂದರ್ಯ ನೋಡಿ ಅನುಭವಿಸಿ ಸಂತೋಷಪಡಲು ಅರ್ಹತೆಯಿದ್ದ ಈ ಮಿತ್ರರು ಮಾಡಿದ ತ್ಯಾಗ ಸಾಮಾನ್ಯವಾದದ್ದಲ್ಲ.



ಆ ರಾತ್ರಿ ನಾವು ನಿದ್ರಿಸಲಿಲ್ಲ: ಹಾಡಿದ್ದು, ಕುಣಿದದ್ದು, ವನಭೋಜನ ಉಂಡದ್ದು, ಮರುದಿವಸದ ಧರ್ಮಸ್ಥಳದ ಕಾಲ್ನಡಿಗೆಯ ಪ್ರಯಾಣಕ್ಕಾಗಿ ಸಿದ್ಧತೆ ಮಾಡಿದ್ದು...

ಮರುದಿನ – ೧೮ನೆಯ ತಾರೀಕು, ಶಿಬಿರದ ಎಂಟನೆಯ ದಿವಸ – ಡೇರೆಗಳನ್ನು ಕಿತ್ತು ಪ್ಯಾಕ್ ಮಾಡಿದಾಗ, ಗಂಟು ಮೂಟೆಗಳನ್ನು ಲಾರಿಯಲ್ಲಿ ಓರಣವಾಗಿ ಜೋಡಿಸಿಟ್ಟಾಗ, ಕೊನೆಯ ಟೀ ತಿಂಡಿ ಸೇವಿಸಿ ನಾವೂರು ಬಂಗ್ಲೆಯಿಂದ ಹೊರಟಾಗ, ಕುದುರೆಮುಖದ ನೆರಳಿನಿಂದ ದೂರ ದೂರ ಸರಿದಾಗ, ಮನಸ್ಸಿನಲ್ಲಿ ಮೂಡಿದ ಹಿರಿಯ ಭಾವ ಕೃತಜ್ಞತೆ, ಸಮರ್ಪಣ ಭಾವ. ಬಂಗ್ಲೆಯ ಆವರಣದ ಚೂತವನಕ್ಕಾಗಮಿಸಿದ್ದ ಚೈತ್ರ ಮಾಸವಿನ್ನೆಂದು ಪುನರಾಗಮಿಸುವುದೋ?



# ಸಾಗರಂ ಸಾಗರೋಪಮಂ

## ಅಧ್ಯಾಯ ಇಪ್ಪತ್ತೇಳು



೧೪ ಮಾರ್ಚ್ ೧೯೬೭, ಕಾಲೇಜಿನಲ್ಲಿ ಅತಿ ಸಂಭ್ರಮದ ದಿವಸ. ವಿಶ್ವವಿದ್ಯಾಲಯದ, ಕಾಲೇಜಿನ, ಎನ್‌ಸಿಸಿಯ ಇತಿಹಾಸದಲ್ಲಿ ಅಂದು 'ಕುದುರೆಮುಖ ದಿವಸ.' ಆ ವೀರರಿಗೆ ಪದವೀಪ್ರದಾನ ಮಾಡುವ ಶುಭ ದಿವಸ. ತುಂಬಿದ ಸಭೆಯ ಅಧ್ಯಕ್ಷತೆಯನ್ನು ಪ್ರಿನ್ಸಿಪಾಲ್ ಆರ್.ಆರ್. ಉಮರ್ಜಿಯವರು ವಹಿಸಿದ್ದರು. ಪದವೀಪ್ರದಾನ ಮಾಡಲು ಮುಖ್ಯ ಅತಿಥಿಗಳಾಗಿ ಕುಲಪತಿ ವಿ.ಕೆ ಗೋಕಾಕರು ದಯಮಾಡಿಸಿದ್ದರು. ಮಾಜಿ ಕುಲಪತಿ ಟಿ.ಆರ್ ಜಯರಾಮನ್, ಎನ್‌ಸಿಸಿ ಡೈರೆಕ್ಟರ್ ಏರ್ ಕಮ್ಮೊಡೋರ್ ಎಸ್.ಕೆ. ಭಕ್ಷಿ ಮೊದಲಾದ ಸೇನಾಗಣ್ಯರು ಉಪಸ್ಥಿತರಿದ್ದರು. ಡಾಕ್ಟರ್ ಗೋಕಾಕರು ತಮ್ಮ ಕವಿವಾಣಿಯಿಂದ ಕುದುರೆಮುಖ ಸಾಹಸಕ್ಕೆ ಒಂದು ನೂತನ ಆಯಾಮ ನೀಡಿದರು, "ನಿಮ್ಮ ಸಾಹಸದ ಇತಿಹಾಸ ಒಂದು ಸುಂದರ ಕಾವ್ಯದಂತಿದೆ. ಎಲ್ಲಿ ಶ್ರದ್ಧಾಸಕ್ತಿಯುತ ಪರಿಶ್ರಮವಿದೆಯೋ ಅಲ್ಲಿ ಸೌಂದರ್ಯವಿದೆ. ವಿದ್ಯಾರ್ಥಿ ಜೀವನದ ಈ ನೂತನಾಧ್ಯಾಯವನ್ನು ನೀವು ಬರೆದು ಪುಸ್ತಕ ರೂಪದಲ್ಲಿ ತಂದರೆ ಅದನ್ನು ವಿಶ್ವವಿದ್ಯಾಲಯ ಸಂತೋಷದಿಂದ ಪ್ರಕಟಿಸುವುದು.




"ಬೆಟ್ಟವನ್ನೇರಿದ್ದೀರಿ. ಅಡೆತಡೆಗಳನ್ನು ನಿವಾರಿಸಿ ಹತ್ತಿದ್ದೀರಿ. ಮೇಲೆ ಹೋದಂತೆ ನಿಮ್ಮ ದೃಷ್ಟಿ ದಿಗಂತ ವಿಸ್ತಾರವಾಗುವುದು. ಜೀವನದ ಪ್ರತಿ ರಂಗದಲ್ಲಿಯೂ ಹೀಗೆಯೇ. ರಸಾಯನ ವಿಜ್ಞಾನದಲಿ ಒಂದು ಸಂಶೋಧನೆ ನಡೆಸುವಾಗ, ಗಣಿತದಲ್ಲಿ ಒಂದು ಸಮೀಕರಣ ಬಿಡಿಸುವಾಗ ಎದುರಾಗುವ ಜಟಿಲ ಸಮಸ್ಯೆಗಳು ಅವೆಷ್ಟೋ. ಅವನ್ನು ಬಗೆಹರಿಸಿಕೊಂಡು ಮುಂದುವರಿದರೆ ನೀವು ಕೃತಕೃತ್ಯರಾಗುತ್ತೀರಿ. ಜ್ಞಾನ ಶಿಖರ ತಲಪುತ್ತೀರಿ. ಇಲ್ಲಿಯೂ ಹಾಗೆಯೇ.

"ನಿಮ್ಮ ಈ ಮಹಾಸಾಧನೆ straight from the horse's mouth ಎಂಬಂತೆ ಕುದುರೆಮುಖದಿಂದಲೇ ಬಂದಿರುವ ಈ ಸಾಹಸದ ವರ್ಣನೆ ನಮಗೆಲ್ಲ ಹೆಮ್ಮೆ ತಂದಿದೆ. ನೀವು ಮುಂದೆಯೂ ಇಂಥ ಸಾಹಸ ನಡೆಸಬೇಕು. ವಿಶ್ವವಿದ್ಯಾಲಯಕ್ಕೆ, ದೇಶಕ್ಕೆ ಕೀರ್ತಿ ತರಬೇಕು."

"ಕಾಲೇಜಿನ ಪ್ರಗತಿಯಲ್ಲಿ ಕುದುರೆಮುಖ ಸಾಹಸ ಬಲು ದೊಡ್ಡ, ದಿಟ್ಟ ಹೆಜ್ಜೆ. ನಿಮ್ಮ ಈ ಸ್ತುತ್ಯರ್ಹ ಕಾರ್ಯ ಕಾಲೇಜಿಗೂ ನನಗೂ ಬಹಳ ಸಂತೋಷ ನೀಡಿದೆ. ಕಾಲೇಜು ಸದಾ ನಿಮ್ಮ ಬೆಂಬಲಕ್ಕಿದೆ" ಎಂದು ಪ್ರೊ. ಆರ್.ಆರ್. ಉಮರ್ಜಿ ಹರಸಿದರು.

ಚಾರಣಿಗರೆದುರಿನಲಿ ತೆರೆದಿಹವು ನೂರೆಂಟು
ದಾರಿಗಳು ಕಡು ಕಠಿಣವಾದುದನ್ನಾಯುವನು
ಧೀರ, ಗುರಿ ಸೇರಿದೊಡೆ ನವಮಾರ್ಗವೊದಗುವುದು
ಸೇರದಿರೆ ಸಾಹಸಕೆ ಚ್ಯುತಿಯುಂಟೆ? ಅತ್ರಿಸೂನು॥